Vol - 8 March 2009 Issue No. 3 Rs. 5.00/-



# ಕರ್ನಾಟಕ ಸ್ಕೌಟ್ ಮತ್ತು ಗೈಡ್

# Karnataka Scout & Guide

ವಾರ್ತಾ ಪತ್ರಿಕೆ





Shri Rameshwar Thakur, His Excellency The Governor of Karnataka & President Bharat Scouts & Guides, India accompanied by Shri L.M. Jain, National Commissioner is reviewing the Parade at the Valedictory function of the **Special National Jamboree** held at Ahmedabad, Feb. 2009.




Scouts & Guides from Karnataka at the National Jamboree Venue

# Editor's desk

**"Leave this world a little better than we found"**

Was said by Lord B.P. and we should remember this when we accept the responsibility as volunteer adult leader in Scout / Guide movement. In whatever capacity we are let's try to do better in serving young people, guiding them to serve the society, grooming them to become good citizen and helping them to adopt survival life skills, to face the challenging world.

All this is possible only when we adopt PIE (Planning, Implementing & Evaluating) the tool of management. Let's plan what is necessary (needs of young minds and society) and what we can achieve (time bound and grass root reality), rather than showing our fantasies and power to young people world around.

The plan should be executed in such a way, that young people should accept it and community should get benefited. The adults as professionals and volunteers have to come out with clarity and commitment to convince with impressive communication skills. This has to be partnership between young and adults to make it result oriented implementation.

The evaluation has many faces and is one of the best way to build a vision for future. Self evaluation is first step; we adults should critically ask ourselves how far we are justified in holding the position and chairs. Team evaluation with format to assess our results achieved. Group or organizational evaluation to measure our image and targets reached. Public evaluation to know our depthness in society and how much we have grown. Media evaluation to see your organizational picture and how much the communities know about us.

Friends the "March" is almost over and time to compile our reports and close our accounts. Let's see how much we have contributed in the last year. It's time to evaluate personally as well as organizationally, so that we can plan better for next year with sound implementation.

With high morale and optimism let's "Leave this World a little better than we found" and do our best to play a role of ideal leaders with preparedness to serve the young and the country.

M.A. KHALID
State Secretary

# ಮುಖ್ಯ ಆಯುಕ್ತರ ನುಡಿ..........

ಮಾನ್ಯರೇ,

ಹಿಂದಿನ ಸಂಚಿಕೆಯಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ತರಬೇತಿ ಶಿಬಿರಗಳು, ರ್‍ಯಾಲಿಗಳು, ವೃಕ್ಷಮಣಿದಾರಕರ ಸಮಾವೇಶಗಳು, ಪೆಟ್ರೋಲ್ ನಾಯಕರ ಶಿಬಿರಗಳು ಜರುಗಿದ ಬಗ್ಗೆ ವರದಿಗಳನ್ನು ಪ್ರಕಟಿಸಲಾಗಿದೆ. ಮಾರ್ಚ್ ತಿಂಗಳಲ್ಲಿ ಗದಗ್ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ಕೌಟ್-ಗೈಡ್ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲಾಗಿತ್ತು. ಗದಗ್ ಜಿಲ್ಲೆಯ ಶಿಬಿರಕ್ಕೆ ರಾಜ್ಯ ಜಂಟಿ ಕಾರ್ಯದರ್ಶಿ ಶ್ರೀ ಎನ್. ಶ್ರೀನಿವಾಸನ್ ಹಾಗೂ ಉತ್ತರ ಕನ್ನಡ ಜಿಲ್ಲೆಯ ಶಿಬಿರಕ್ಕೆ ರಾಜ್ಯ ಗೈಡ್ ತರಬೇತಿ ಆಯುಕ್ತೆ ಶ್ರೀಮತಿ ಕೆ.ಕೆ. ಲೀಲಾ ಭೇಟಿನೀಡಿ ಶಿಬಿರಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ ಮಾಡಿರುತ್ತಾರೆ.

ಮಾರ್ಚ್ 8 ಮತ್ತು 9ರಂದು ರಾಜ್ಯ ಕಾರ್ಯಾಲಯದಲ್ಲಿ ರಾಜ್ಯದ ಸಹಾಯಕ ರಾಜ್ಯ ಸಂಘಟನಾ ಹಾಗೂ ಜಿಲ್ಲಾ ಸಂಘಟನಾ ಆಯುಕ್ತರುಗಳ ಸಭೆ ಜರುಗಿತು. ಸಭೆಯಲ್ಲಿ ಜಿಲ್ಲೆ ಮತ್ತು ರಾಜ್ಯ ಮಟ್ಟದಲ್ಲಿ ನಡೆದ ಚಟುವಟಿಕೆಗಳು, ತರಬೇತಿ ಶಿಬಿರಗಳು, ಸ್ಕೌಟ್ಸ್-ಗೈಡ್ಸ್-ಕಬ್ಸ್-ಬುಲ್‌ಬುಲ್ಸ್-ರೋವರ್ಸ್-ರೇಂಜರ್ಸ್ ದಳಗಳ ಅಂಕಿ-ಅಂಶಗಳ ಬಗ್ಗೆ ಜಿಲ್ಲಾವಾರು ಪರಿಶೀಲಿಸಲಾಯಿತು. ಹಲವು ಜಿಲ್ಲೆಗಳಿಂದ ದಳಗಳ ನೋಂದಣಿ ವಿವರಗಳು ರಾಜ್ಯ ಸಂಸ್ಥೆಗೆ ಬರದಿರುವ ಬಗ್ಗೆಯೂ ಹಾಗೂ ಹಲವು ಜಿಲ್ಲೆಗಳಲ್ಲಿ ಶೇಕಡಾ 50% ಕ್ಕಿಂತಲೂ ಕಡಿಮೆ ಅಂಕಿ ಅಂಶ ಇರುವುದನ್ನು ಸಭೆಯ ಗಮನಕ್ಕೆ ತಂದು ಮಾರ್ಚ್ 31, 2009 ರೊಳಗಾಗಿ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ಈಗಾಗಲೇ ಸಂಗ್ರಹಿಸಿರುವ ದಳಗಳ ನೊಂದಣಿ ಹಣವನ್ನು ರಾಜ್ಯ ಸಂಸ್ಥೆಗೆ ತಲುಪಿಸಲು ಸೂಚಿಸಲಾಗಿದೆ. ಜಿಲ್ಲಾ ಸಂಸ್ಥೆಗಳು ಹಾಗೂ ಜಿಲ್ಲಾ ಸಂಘಟನಾ ಆಯುಕ್ತರುಗಳು ಈಗಾಗಲೇ ಸೂಕ್ತ ಕ್ರಮ ತೆಗೆದುಕೊಂಡಿದ್ದಾರೆಂದು ನಂಬಿದ್ದೇನೆ.

ರಾಜ್ಯ ಪುರಸ್ಕಾರ ಹಾಗೂ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ವಿವಿದ ಜಿಲ್ಲೆಗಳಿಂದ ಬರುತ್ತಿರುವ ಅರ್ಜಿಗಳ ಸಂಖ್ಯೆ ಹೆಚ್ಚುತ್ತಿದ್ದು, ರಾಷ್ಟ್ರೀಯ ಸಂಸ್ಥೆಗೆ ಈ ಅರ್ಜಿಗಳನ್ನು ಕಳುಹಿಸಿದಾಗ ಸಾಕಷ್ಟು ಅರ್ಜಿಗಳು ತಿರಸ್ಕೃತಗೊಳ್ಳುತ್ತಿವೆ. ಆದುದರಿಂದ ಇತ್ತೀಚೆಗೆ ರಾಜ್ಯ ಕಾರ್ಯಾಲಯದಲ್ಲಿ ಜರುಗಿದ ಸಭೆಯಲ್ಲಿ ರಾಜ್ಯ ಪುರಸ್ಕಾರಕ್ಕೆ ಒಂದು ದಳದಿಂದ ಕನಿಷ್ಠ 8 ರಿಂದ 10 ಅಭ್ಯರ್ಥಿಗಳಿಗೆ ಮಾತ್ರ ದಳನಾಯಕರು ಮಾರ್ಗದರ್ಶನ ನೀಡಿ ರಾಜ್ಯ ಪುರಸ್ಕಾರ ಪರೀಕ್ಷೆಗೆ ಸಿದ್ಧಪಡಿಸಲು ಅವಕಾಶ ನೀಡಬೇಕೆಂದು ತೀರ್ಮಾನಿಸಲಾಗಿದೆ. ಇದಲ್ಲದೆ ರಾಜ್ಯ ಸಂಸ್ಥೆ ರಾಜ್ಯದ ಎಲ್ಲಾ ವಿಭಾಗಗಳಲ್ಲಿ 2-3 ಜಿಲ್ಲೆಗಳನ್ನು ಒಟ್ಟುಗೂಡಿಸಿ ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ತರಬೇತಿ ನೀಡಲು ಅರ್ಹತೆಯುಳ್ಳ ಆ ಜಿಲ್ಲೆಗಳ ಸ್ಕೌಟ್ಸ್-ಗೈಡ್ಸ್‌ನ ದಳನಾಯಕರುಗಳಿಗೆ ಹೆಚ್ಚಿನ ತರಬೇತಿ ನೀಡಬೇಕೆಂದು ಮತ್ತು ಅನುಭವಿ ತರಬೇತಿ ನಾಯಕ-ನಾಯಕಿಯರುಗಳನ್ನು ಮಾರ್ಗದರ್ಶನ ಮಾಡಲು ಈ ಶಿಬಿರಗಳಿಗೆ ಕಳುಹಿಸಬೇಕೆಂದು ತೀರ್ಮಾನಿಸಲಾಗಿದೆ. ಈ ಬಗ್ಗೆ ವಿವರವಾದ ಸುತ್ತೋಲೆಯನ್ನು ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ ರಾಜ್ಯ ಸಂಸ್ಥೆಯಿಂದ ಸದ್ಯದಲ್ಲಿಯೇ ನೀಡಲಾಗುವುದು.

ರಾಜ್ಯದ ಎಲ್ಲಾ ಕಬ್ ಮಾಸ್ಟರ್-ಫ್ಲಾಕ್ ಲೀಡರ್‌ಗಳಲ್ಲಿ, ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್‌ಗಳಲ್ಲಿ ನನ್ನ ಕಳಕಳಿಯ ಮನವಿ-ನಿಮ್ಮ ದಳಗಳ ಸ್ಕೌಟ್-ಗೈಡ್‌ಗಳನ್ನು ಮುಂದಿನ ದಿನಗಳಲ್ಲಿ ರಾಜ್ಯ ಪುರಸ್ಕಾರ-ರಾಷ್ಟ್ರಪತಿ ಸ್ಕೌಟ್-ಗೈಡ್, ರಾಷ್ಟ್ರಪತಿ ರೋವರ್-ರೇಂಜರ್‌ಗಳಾಗಬೇಕಾಗಿರುವುದರಿಂದ ಅವರುಗಳು ಕಬ್-ಬುಲ್‌ಬುಲ್ಸ್ ಮಟ್ಟದಿಂದ ರಾಷ್ಟ್ರಪತಿ ಪುರಸ್ಕಾರದ ಅರ್ಹತೆ ಪಡೆಯಲು ವಿವಿದ ಹಂತದಲ್ಲಿ ಹಲವಾರು ನಿಗದಿತ ಪದಕಗಳನ್ನು

ಪಡೆಯುವುದು ಹಾಗೂ ಉಪರಾಷ್ಟ್ರಪತಿಗಳ ಹಾಗು ಪ್ರಧಾನ ಮಂತ್ರಿಗಳ ಪದಕ ಪುರಸ್ಕಾರ ಪಡೆಯುವುದು ಅತ್ಯಂತ ಅವಶ್ಯಕ ಹಾಗು ಅನಿವಾರ್ಯವಾಗಿದೆ. ಈ ದಿಶೆಯಲ್ಲಿ ನಿಮ್ಮ ದಳಗಳ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸೂಕ್ತ ಮಾರ್ಗದರ್ಶನ ನೀಡುವುದು ನಿಮ್ಮಗಳ ಆದ್ಯ ಕರ್ತವ್ಯವಾಗಿದೆ. ಹಲವಾರು ಸಂದರ್ಭಗಳಲ್ಲಿ ರಾಷ್ಟ್ರೀಯ ಸಂಸ್ಥೆಯವರು ಏರ್ಪಡಿಸುವ ಪದಕ ಅರ್ಹತಾ ಶಿಬಿರಗಳಿಗೆ ಬರುವ ಸ್ಕೌಟ್ಸ್-ಗೈಡ್ಸ್‌ಗಳ ಹಲವಾರು ಮಾಹಿತಿಗಳನ್ನು ಸೂಕ್ತ ರೀತಿಯಲ್ಲಿ ಪಡೆಯದಿರುವ ಅಂಶ ನನ್ನ ಗಮನಕ್ಕೆ ಬಂದಿದೆ.

ನಿಮ್ಮ ದಳದ ಒಬ್ಬ ಸ್ಕೌಟ್-ಗೈಡ್, ರಾಜ್ಯ ಪುರಸ್ಕಾರ-ರಾಷ್ಟ್ರಪತಿ ಪುರಸ್ಕಾರವನ್ನು ಪಡೆದಾಗ ನಿಮಗಾಗುವ ಹೆಮ್ಮೆ - ಅಭಿಮಾನ ನಿಜಕ್ಕೂ ಅವರ್ಣನೀಯ. ನಿಮ್ಮಗಳ ನಿರಂತರ ಪ್ರಾಮಾಣಿಕ ಶ್ರದ್ಧೆಗಳಿಂದ ಒಬ್ಬ ಸುಶಿಕ್ಷಿತ - ಸಭ್ಯ ನಾಗರಿಕನನ್ನು ಸಮಾಜಕ್ಕೆ ನೀಡಿದ ಗೌರವ ನಿಮ್ಮದಾಗುತ್ತದೆ. ಆದುದರಿಂದಲೇ ನಾನು ಭಾಗವಹಿಸಿದ ಎಲ್ಲಾ ಸಭೆ-ಸಮಾರಂಭ-ಶಿಬಿರಗಳಲ್ಲಿ ಸ್ಕೌಟ್-ಗೈಡ್ ಚಳವಳಿಯ ಚಿಂತನೆ-ಆದರ್ಶಗಳನ್ನು ಸಮಾಜಮುಖಿ ಮಾಡುವಲ್ಲಿ ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್‌ಗಳ ಪಾತ್ರ ಅತ್ಯಂತ ಮಹತ್ವದ್ದು ಎಂದು ನಿಮಗೆಲ್ಲಾ ಸಂಸ್ಥೆಯ ಪರವಾಗಿ ಕೃತಜ್ಞತೆ ಸಲ್ಲಿಸಿದ್ದೇನೆ.

ಮಾರ್ಚ್ ಬಂದರೆ ಎಲ್ಲರೂ ಪರೀಕ್ಷೆಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತೇವೆ. ಸ್ಕೌಟ್-ಗೈಡ್ ಸಂಸ್ಥೆಯಲ್ಲಿ ವಿವಿಧ ಹಂತಗಳಲ್ಲಿ ಸೇವೆ ಸಲ್ಲಿಸುತ್ತಿರುವ ತಮಗೂ ಹಾಗೂ ಎಲ್ಲ ಕಬ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೂ ದಯಾಮಯನಾದ ಭಗವಂತ ನಿಮ್ಮಗಳೆಲ್ಲರ ಉದ್ದೇಶ ಈಡೇರುವಲ್ಲಿ ಆಶೀರ್ವದಿಸಲಿ ಎಂದು ಪ್ರಾರ್ಥಿಸುತ್ತೇನೆ.

ಸ್ಕೌಟ್-ಗೈಡ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

**ಸ್ಕೌಟಿಂಗ್ / ಗೈಡಿಂಗ್ : ಒಂದು ಆಟ, ಶಿಕ್ಷಣ ಮತ್ತು ಸಾಧನೆ**

**ಸ್ಕೌಟಿಂಗ್ / ಗೈಡಿಂಗ್ : ಬೇರೇನೂ ಅಲ್ಲ; ಒಂದು ಜೀವನ ವಿಧಾನ**

**ಸ್ಕೌಟಿಂಗ್ / ಗೈಡಿಂಗ್ : ಅದರ ಮಂತ್ರ ಸೇವೆ; ಸಹಬಾಳ್ವೆ;**

**ಸ್ಕೌಟಿಂಗ್ / ಗೈಡಿಂಗ್ : ಅದರ ವ್ಯಾಪ್ತಿ ಇಡೀ ಜಗತ್ತು**

**ಸ್ಕೌಟಿಂಗ್ / ಗೈಡಿಂಗ್ : ಆತ್ಮ ವಿಶ್ವಾಸ, ಸಾಹಸ ಮತ್ತು ಉಲ್ಲಾಸ;**

**ಸ್ಕೌಟಿಂಗ್ / ಗೈಡಿಂಗ್ : ಶಿಸ್ತು, ಸ್ವಾವಲಂಬನೆ ಮತ್ತು ದೈವಭಕ್ತಿ.**

# ರಾಜ್ಯ ವಾರ್ತೆಗಳು

## CELEBRATING 100 YEARS OF SCOUTING IN INDIA 1909 -2009

## Special National Jamboree Held at Ahmedabad Gujarat From 1st to 7th February 2009

The Special National Jamboree was held at Ahmedbad Education Ground, Ahmedabad from 1st to 7th February 2009. Sri Rameshwar Thakur, His Excellency The Governor of Karnataka and President, The Bharat Scouts and Guides, India was the Chief Guest for the Valedictory Function.

Sri Naval Kishore Sharma, His Excellency The Governor of Gujarat was the Chief Guest on 3-2-2009. Sri Narendra Modi, Hon'ble Chief Minister of Gujurat Visited the Jamboree on 4-2-2009. Sri L.M. Jain National Commissioner was also present on the occasion.

224 Scouts and Guides alongwith Unit Leaders from Karnataka participated in the event. Sri A.L. Sheikh Suranagi, Dist. Organising Commissioner (S) Haveri, Smt. Shamala, Asst. State Organising Commissioner (G) Kolar were the Contigent Leaders for Karnataka State. Sri Eranna, Dist. Organising Commissioner(S) Koppal, Sri Umesh Mysore, Smt. Bharathi Dias, Asst. State Organising Commissioner (G) Chamarajanagar and Smt. Padma Bhandigeri were the staff.

The Scouts and Guides participated in the Adventure activities, Fun base, Intellectual & Self Development, Skill, Service and Integration Game activities.

## National Level Camps held in Karnataka

### National Integration Camp held at Dr. Annie Besant Park

National Integration Camp was held at Dr. Annie Besant Park from 17th to 21st February 2009. 256 Scouts and Guides from **Himachal Pradesh, Tamil Nadu, Southern Railway & Karnataka States participated in the Event.** 53 Scouts and Guides from Karnataka attended the Event. Sri Kondajji B. Shanmukhappa, State Chief Commissioner visited Besant Park alongwith Sri N. Chandrashekhar, Asst. State Commissioner(S) on 20th February 2009. Miss Suman Latha, Asst. Director, Southern Region Bangalore was the Leader of the event.

Cont'd on Page No. 23

# ಜಿಲ್ಲಾ ವಾರ್ತೆ



## ರಾಯಚೂರು

ದಿನಾಂಕ: 06-03-2009 ರಂದು ಡಾ|| ಆರ್.ಜಿ. ನಡಾದೂರ್, ಭಾ.ಆ.ಸೇ. ಪ್ರದಾನ ಕಾರ್ಯದರ್ಶಿ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಶ್ರೀ ಜಿ. ಕುಮಾರ ನಾಯಕ್. ಭಾ.ಆ.ಸೇ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಶ್ರೀ ಸೆಲ್ವಕುಮಾರ್, ಭಾ.ಆ.ಸೇ., ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ ಇವರುಗಳು ರಾಯಚೂರಿಗೆ ಭೇಟಿನೀಡಿದ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಕೆ. ತಿಮ್ಮಯ್ಯ, ಡಾ|| ನರಸಿಂಹ ಮೂರ್ತಿ ಹಾಗೂ ಇತರರು ಭೇಟಿ ನೀಡಿ ಜಿಲ್ಲೆಯಲ್ಲಿನ ಸ್ಕೌಟಿಂಗ್, ಗೈಡಿಂಗ್ ಚಟುವಟಿಕೆಗಳ ಬಗ್ಗೆ ವಿವರಿಸಿದರು.



## ದಾವಣಗೆರೆ – ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ದಾವಣಗೆರೆ ಉತ್ತರವಲಯದ ಕಬ್ಸ್ ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಮೇಳವನ್ನು ದಿನಾಂಕ 7-2-09 ಮತ್ತು ದಿನಾಂಕ 8-2-09ರಂದು ಅಕ್ಕಮಹಾದೇವಿ ಬಾಲಿಕಾ ಪ್ರೌಢಶಾಲೆ ಹಾಗೂ ಸರ್ಕಾರಿ ಪ್ರೌಢಶಾಲೆ, ಕೆ.ಆರ್. ಮಾರ್ಕೆಟ್ ದಾವಣಗೆರೆ, ಆವರಣದಲ್ಲಿ ನಡೆಸಲಾಯಿತು.

300 ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್ ಭಾಗವಹಿಸಿದ್ದ ರ್‍ಯಾಲಿಯ ಉದ್ಘಾಟನೆಯನ್ನು ಶ್ರೀ ವೈ.ಎ. ನಾರಾಯಣಸ್ವಾಮಿ ವಿಧಾನಪರಿಷತ್ ಸದಸ್ಯರು ನೆರವೇರಿಸಿದರು. ಇವರು ಮಾತನಾಡುತ್ತಾ ವಿದ್ಯಾರ್ಥಿಗಳು ಸ್ವತಂತ್ರವಾಗಿ ಸ್ವಾವಲಂಬಿ ಜೀವನ ಸಾಗಿಸಲು ಮತ್ತು ದೇಶದ ಉತ್ತಮ ಪ್ರಜೆಯನ್ನಾಗಿ ಬೆಳೆಸಲು ಸ್ಕೌಟಿಂಗ್ ಸಹಕಾರಿಯಾಗಿದೆ ಎಂದು ನುಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಬಿ.ಸಿ. ಉಮಾಪತಿ, ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉತ್ತರ ವಲಯ, ಇವರು ವಹಿಸಿದ್ದರು. ವೇದಿಕೆಯಲ್ಲಿ ಶ್ರೀ ಮುರುಘರಾಜೇಂದ್ರ ಚಿಗಟೇರಿ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮಹಮದ್ ವಾಸಿಲ್, ಕೇಂದ್ರ ಸ್ಥಾನಿಕ ಆಯುಕ್ತರು. ಶ್ರಿ ಡಿ.ಆರ್. ಅಮಿತ್ ಬಿ.ಇ.ಒ. (ಉತ್ತರ ವಲಯ) ಹಾಗೂ ಕಾರ್ಯಾಧ್ಯಕ್ಷರು, ಶ್ರೀ ಎಂ.ಕೆ. ಬಕ್ಕಪ್ಪ, ಶ್ರೀಕಣಕುಪ್ಪಿ, ಶ್ರೀ ಮುರುಗೇಶಪ್ಪ, ಶ್ರೀ ಎನ್.ಕೆ. ಭೀಮರಾಜ್, ಸಿ.ಎ.ಇ.ಒ., ಉಪಸ್ಥಿತರಿದ್ದರು. ರ್‍ಯಾಲಿಯಲ್ಲಿ ಮಕ್ಕಳಿಗೆ ವಿವಿಧ ಸಾಹಸ ಚಟುವಟಿಕೆಗಳು ಕರಕುಶಲವಸ್ತುಗಳ ತಯಾರಿ, ಚಿತ್ರಕಲಾ ಸ್ಪರ್ಧೆ ಏರ್ಪಡಿಸಲಾಗಿತ್ತು. ಶಿಬಿರಾಗ್ನಿ ಕಾರ್ಯಕ್ರಮ ಮತ್ತು ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು. ದಿನಾಂಕ 08-02-09 ರಂದು ಸಂಜೆ ಮುಕ್ತಾಯ ಸಮಾರಂಭದಲ್ಲಿ ಶ್ರೀ ಡಿ.ಆರ್. ಅಮಿತ್, ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.



## ಚಾಮರಾಜನಗರ

'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸದಸ್ಯರಾಗಿರುವ ವಿದ್ಯಾರ್ಥಿಗಳು ಒಳ್ಳೆಯ ವ್ಯಕ್ತಿಗಳಾಗಿ ಸಮಾಜದಲ್ಲಿ ಬದುಕಲು ಕಲಿಯಿರಿ ಹಾಗೂ ಮಾನವೀಯಗುಣ, ಅನುಕಂಪ ಬೆಳೆಸಿಕೊಳ್ಳಿ' ಎಂದು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿ. ಜಯರಾಂ ಕರೆ ನೀಡಿದರು.

ನಗರದ ಶಿಕ್ಷಕರ ಭವನದಲ್ಲಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಸಂಸ್ಥಾಪಕ ಬೇಡನ್ ಪೊವೆಲ್ ಮತ್ತು ಲೇಡಿ ಬೇಡನ್ ಪೊವೆಲ್ ಜನ್ಮ ದಿನಾಚರಣೆ ಅಂಗವಾಗಿ ನಡೆದ ಕಾರ್ಯಕ್ರಮವನ್ನು ಶನಿವಾರ ಉದ್ಘಾಟಿಸಿ ಅವರು ಮಾತನಾಡಿದರು.



ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕ ಶ್ರೀ ಎನ್.ಎ. ರಾಮಸ್ವಾಮಿ ಮಾತನಾಡಿ, ಮಕ್ಕಳಲ್ಲಿ ಶಿಸ್ತು, ಒಳ್ಳೆಯ ಸ್ವಭಾವ ಕಲಿಸಲು ಸ್ಕೌಟ್ಸ್ ಮತ್ತು ಗೈಡ್ಸ್ ಅವಶ್ಯಕ ಎಂದು ತಿಳಿಸಿದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಹಾಯಕ ರಾಜ್ಯ ಸಂಘಟನಾ ಆಯುಕ್ತೆ ಭಾರತಿ ಡಯಾಸ್ ಮಾತನಾಡಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಂಸ್ಥಾಪಕ ಬೇಡನ್ ಪೊವೆಲ್ ಮತ್ತು ಲೇಡಿ ಬೇಡನ್ ಪೊವೆಲ್‌ರ ಜನ್ಮ ದಿನಾಚರಣೆಯನ್ನು ಏಡ್ಸ್ ಮತ್ತು ಮಲೇರಿಯಾ ನಾಶಪಡಿಸುವ, ವಿಶ್ವ ಭ್ರಾತೃತ್ವ ದಿನವನ್ನಾಗಿ ಕೂಡ ಆಚರಿಸಲಾಗುತ್ತಿದೆ ಎಂದರು.

ಸಮಾರಂಭಕ್ಕೂ ಮುಂಚೆ ಊರಿನ ಪ್ರಮುಖ ಬೀದಿಗಳಲ್ಲಿ ನಡೆದ ಪಥಸಂಚಲನಕ್ಕೆ ಹೆಚ್ಚುವರಿ ಪೋಲೀಸ್ ವರಿಷ್ಠಾಧಿಕಾರಿ ಎನ್.ಟಿ. ಶಿವಕುಮಾರ್ ಚಾಲನೆ ನೀಡಿದರು.

ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತ ಜಿ.ಆರ್. ಅಶ್ವಥ್ ನಾರಾಯಣ, ಜಿಲ್ಲಾ ಗೈಡ್ಸ್ ಆಯುಕ್ತೆ, ಶ್ರೀಮತಿ ಪ್ರೇಮಾ ಶಿವಸ್ವಾಮಿ, ಶ್ರೀಮತಿ ಭಾರತಿ ನಾಗರಾಜ್, ಶ್ರೀ ವೆಂಕಟನಾಗಪ್ಪ ಶೆಟ್ಟಿ, ಶ್ರೀ ಸುರೇಶ್ ಕುಮಾರ್, ಶ್ರೀ ಸಿ.ವಿ. ಶ್ರೀನಿವಾಸಶೆಟ್ಟಿ. ಡಯಟ್‌ನ ಡಾ. ಕಾಂತ, ಶ್ರೀ ರಾಮಚಂದ್ರ ಉಪಸ್ಥಿತರಿದ್ದರು. ಶ್ರೀ ಎಚ್.ಆರ್. ರೇವಣ್ಣ ಸ್ವಾಗತಿಸಿ, ಶ್ರೀ ಭೋಗನಂಜಪ್ಪ ವಂದಿಸಿದರು.




ದಿನಾಂಕ 22-2-2009ರಂದು ಹಾಸನ ನಗರದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಂಸ್ಥೆಯ ಆವರಣದಲ್ಲಿ ಆಯೋಜಿಸಿದ್ದ ಲಾರ್ಡ್ ಬೇಡನ್ ಪೊವೆಲ್ ಅವರ ಜನ್ಮದಿನಾಚರಣೆಯ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ಡಾ: ವೀರಭದ್ರಪ್ಪ ಅವರು ಶಿಕ್ಷಣ ಮಾನವನಿಗೆ ಬದುಕನ್ನು ಕಲಿಸುತ್ತದೆ. ವಿದ್ಯೆ ಜ್ಞಾನದ ಪ್ರತೀಕ, ವಿದ್ಯೆ ಮನುಷ್ಯನ ಒಳಗಣ್ಣನ್ನು ತೆರೆಸುತ್ತದೆ. ಅದೇ ರೀತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸೇರಿದ ಯಾವುದೇ ವಿದ್ಯಾರ್ಥಿ ತಾನು ಹೇಗೆ ಸ್ವತಂತ್ರವಾಗಿ ಬದುಕಬೇಕು, ಏತಕ್ಕಾಗಿ ಬದುಕ ಬೇಕೆಂಬುದನ್ನು ಕಲಿತು ಶಿಸ್ತಿನ ಸಿಪಾಯಿಯಾಗಿ ಬೆಳೆಯುತ್ತಾನೆ ಎಂದು ನುಡಿದರು.

ಇದೇ ಸಮಾರಂಭದ ಪ್ರಥಮದಲ್ಲಿ ಪಥ ಸಂಚಲನ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಸನ್ಮಾನ್ಯ ಶ್ರೀ ಕೆ.ವಿ. ಶರತ್ ಚಂದ್ರರವರು ಮಾತನಾಡಿ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಸಮಾಜದಲ್ಲಿರುವ ಕಾನೂನುಗಳ ಅರಿವನ್ನು ಮೂಡಿಸಿ ಸತ್ಪ್ರಜೆಗಳಾಗಲು ಸಂಘ ಸಂಸ್ಥೆಗಳು ಸಹಕಾರ ನೀಡಲು ಮುಂದಾದಲ್ಲಿ ಮಕ್ಕಳ ಭವಿಷ್ಯ ಉಜ್ವಲವಾಗುವುದರಲ್ಲಿ ಸಂಶಯವಿಲ್ಲ ಎಂದರು.

ಈ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿ ಮಾತನಾಡಿದ ಜಿಲ್ಲಾ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಸನ್ಮಾನ್ಯ ಶ್ರೀ ಕೆ.ಸಿ. ಕೃಷ್ಣಶೆಟ್ಟಿ ಅವರು ಮಾತನಾಡಿ ಚಿಕ್ಕ ವಯಸ್ಸಿನಲ್ಲೇ ಉತ್ತಮ ನಾಗರೀಕತೆ ಬೆಳಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಸಹಕಾರ ನೀಡುತ್ತಾ ಬಂದಿದೆ. ಈ ಸಂಸ್ಥೆಯಲ್ಲಿ ತರಬೇತಿ ಪಡೆದ ಶಿಕ್ಷಕ-ಶಿಕ್ಷಕಿಯರುಗಳು ಅವರವರ ಶಾಲೆಗಳಲ್ಲಿ ಕಡ್ಡಾಯವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳನ್ನು ತೆರೆಯಲು ತಮ್ಮ ಇಲಾಖೆಯ ವತಿಯಿಂದ ಸೂಕ್ತಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸಿದರು.

ಶ್ರೀಮತಿ ಪದ್ಮಮ್ಮ ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಚಂದ್ರಾಚಾರ್ ವಂದಿಸಿದರು. ಕಾರ್ಯಕ್ರಮ ನಿರೂಪಣೆಯನ್ನು ಶ್ರೀ ಎಂ.ಎಸ್. ಪ್ರಕಾಶ್, ಕಾರ್ಯದರ್ಶಿ, ನೆರವೇರಿಸಿದರು. ಡಾ. ಪಾಟೀಲ್ ರವರು ಹಾಲು ಉತ್ಪಾದಕರ ಮಹಾ ಮಂಡಲಿಯ ಅಧಿಕಾರಿಗಳು ಹಾಲು ಉತ್ಪಾದಕರ ಮಹಾ ಮಂಡಳಿಯ ವತಿಯಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಮಜ್ಜಿಗೆ ವ್ಯವಸ್ಥೆಯನ್ನು ಮಾಡಿಕೊಟ್ಟರು. ಶ್ರೀಯುತ ಎಲ್.ಟಿ. ಲೋಕೇಶ್, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಸ್ಕೌಟ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ರವರ ಹುಟ್ಟು ಹಾಗೂ ಚರಿತ್ರೆಯ ಬಗ್ಗೆ ವಿವರವಾದ ಮಾಹಿತಿ



ನೀಡಿದರು.

ದಿನಾಚರಣೆಯ ಅಂಗವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗಾಗಿ ಬೆಂಕಿ ಇಲ್ಲದೆ ಅಡಿಗೆ ಮಾಡುವುದು, ಗೈಡ್ಸ್‌ಗಳಿಗೆ ರಂಗೋಲಿ ಸ್ಪರ್ಧೆ, ಧ್ವಜ ಸ್ಥಂಬ ನಿರ್ಮಾಣ, ಗ್ರೀಟಿಂಗ್ ಕಾರ್ಡ್ ತಯಾರಿಸುವುದು, ಡ್ರಾಯಿಂಗ್, ಕರಕುಶಲತೆ, ಸುಧಾರಿತ ಗುಡಾರಗಳ ನಿರ್ಮಾಣ ಮುಂತಾದ ಚಟುವಟಿಕೆಗಳನ್ನು ಹಾಗೂ ಕಬ್ಸ್-ಬುಲ್ ಬುಲ್ಸ್‌ಗಳಿಗೆ ಮಾಡಲ್ ಮೇಕಿಂಗ್, ಗ್ರೀಟಿಂಗ್ ಕಾರ್ಡ್ ತಯಾರಿಸುವುದು ಮಣ್ಣಿನಲ್ಲಿ ವಿವಿಧ ಆಕೃತಿಗಳನ್ನು ಮಾಡುವುದು ಮುಂತಾದ ಚಟುವಟಿಕೆಗಳನ್ನು ಯೋಜಿಸಲಾಗಿತ್ತು. ಕಾರ್ಯಕ್ರಮಕ್ಕೆ ಹಾಸನ ನಗರ ಹಾಗೂ ಗ್ರಾಮಾಂತರ ಶಾಲೆಗಳ 600ಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಭಾಗವಹಿಸಿದ್ದರು.

## ಉಡುಪಿ

### ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಬ್, ಬುಲ್-ಬುಲ್ ಉತ್ಸವ-2009

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮತ್ತು ಕಬ್ಸ್, ಬುಲ್-ಬುಲ್ಸ್ ಮಕ್ಕಳ ರ್‍ಯಾಲಿಯು ಸ.ಹಿ.ಪ್ರಾ.ಶಾಲೆ ಹಟ್ಟಿಕುದ್ರು. ಇಲ್ಲಿ ಜನವರಿ 30 ಮತ್ತು 31ರಂದು ಶಾಲಾ ಶಿಕ್ಷಕರ ಮತ್ತು ಊರ ಸಮಸ್ತರ ಆತಿಥ್ಯದಲ್ಲಿ ಬಹು ವಿಜೃಂಭಣೆಯಿಂದ ನಡೆಯಿತು. ಮಾಜಿ ಶಾಸಕರಾದ ಶ್ರೀ ಅಪ್ಪಣ್ಣ ಹೆಗ್ಡೆ ಇವರು. ರ್‍ಯಾಲಿ ಉದ್ಘಾಟಿಸಿದರು. ಸಭೆಯ ಅಧ್ಯಕ್ಷತೆಯನ್ನು ಸಂಸ್ಥೆಯ ಅಧ್ಯಕ್ಷರಾದ ಶ್ರೀ ದಿನಕರ ಶೆಟ್ಟಿಯವರು ವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಗೋಪಾಲ ಶೆಟ್ಟಿಯವರು ಹಟ್ಟಿಕುದ್ರು ಶಾಲೆಯ ನೂತನ ದಳವನ್ನು ಉದ್ಘಾಟಿಸಿ ರ್‍ಯಾಲಿಗೆ ಶುಭ ಕೋರಿದರು. ಮುಖ್ಯ ಅತಿಥಿಗಳಾಗಿ ಶ್ರೀಕಂಠ ಉಡುಪ, ಸ್ಥಳೀಯ ಯುವಕ ಮಂಡಲ ಅಧ್ಯಕ್ಷ ಜಯಸೂರ್ಯ. ಶಾಲಾ ಎಸ್.ಡಿ.ಎಂ.ಸಿ. ಅಧ್ಯಕ್ಷ ಶ್ರೀ ನರಸಿಂಹ ಪೂಜಾರಿ ಸ್ಥಳೀಯ ದಾನಿ ಶ್ರೀ ಅನಂತ ಭಟ್ ಇವರೆಲ್ಲರೂ ಭಾಗವಹಿಸಿದ್ದರು. ರ್‍ಯಾಲಿ ನಿರ್ದೇಶಕ ಶ್ರೀ ಎಚ್. ಪದ್ಮನಾಭ ಅಡಿಗ ರ್‍ಯಾಲಿ ಪಕ್ಷಿನೋಟ ನೀಡಿದರು. ಹಿರಿಯ ಸ್ಕೌಟರ್ ಶ್ರೀ ಟಿ. ಆನಂದ ಅಡಿಗ, ಶ್ರೀ ಕೊಗ್ಗ ಗಾಣಿಗ ಮತ್ತು ಬಿ. ಸದಾಶಿವ ಭಟ್ ಇವರು ಹಾಜರಿದ್ದರು. ಪ್ರಾರಂಭದಲ್ಲಿ ಆತಿಥ್ಯ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಎ. ಸುರೇಂದ್ರ ಶೆಟ್ಟಿಯವರು. ಸರ್ವರನ್ನು ಸ್ವಾಗತಿಸಿದರು. ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ಪ್ಲೋರಿನ್ ವಂದಿಸಿದರು. ಸ್ಕೌಟರ್ ಜಯಕರ ಶೆಟ್ಟಿ ಕಾರ್ಯಕ್ರಮ ನಿರೂಪಿಸಿದರು.



### ಸ್ಕೌಟ್ಸ್ ಸಂಸ್ಥಾಪಕರ ಮತ್ತು ಚಿಂತನಾ ದಿನಾಚರಣೆ

ಕುಂದಾಪುರ ತಾಲೂಕು ಕುಂಭಾಶಿಯ ಆನೆಗುಡ್ಡ ಶ್ರೀ ವಿನಾಯಕ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ 35 ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಹೊಂಬಾಡಿ-ಮಂಡಾಡಿಯ ವಿವೇಕೋದಯ ಖಾಸಗಿ ಹಿರಿಯ ಪ್ರಾಥಮಿಕ ಶಾಲೆಯ 13 ಸ್ಕೌಟ್ಸ್‌ಗಳು ದಿನಾಂಕ : 22-02-2009 ರ ಭಾನುವಾರದಂದು ಸಂಸ್ಥಾಪಕರ ಮತ್ತು ಚಿಂತನಾ ದಿನಾಚರಣೆ ಆಚರಣೆಗಾಗಿ ಮುರ್ಡೇಶ್ವರ ದಲ್ಲಿ ಭಾಗವಹಿಸಿದ್ದರು.

ಬೆಳಗ್ಗೆ ರೈಲು ನಿಲ್ದಾಣದ ಬಳಿ ಧ್ವಜಾರೋಹಣ ದೊಂದಿಗೆ ಕಾರ್ಯಕ್ರಮ ಪ್ರಾರಂಭಗೊಂಡು ನಂತರ ಅಲ್ಲಿಂದ ಮುರ್ಡೇಶ್ವರನ ದರ್ಶನ ಪಡೆದು ಪ್ರಸಾದ ಸ್ವೀಕರಿಸಿ, ದೇವಸ್ಥಾನದ ಸುತ್ತಲಿನ ಸ್ಥಳಗಳನ್ನು ವೀಕ್ಷಿಸಲಾಯಿತು.

ರೈಲು ನಿಲ್ದಾಣದ ಬಳಿ ಮಧ್ಯಾಹ್ನದ ನಂತರ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ಸ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್‌ರ ಜೀವನದ ಬಗ್ಗೆ ಹಾಗೂ ಚಿಂತನಾ ದಿನಾಚರಣೆಯ ಮಹತ್ವವನ್ನು ಸ್ಕೌಟರ್ ಪಿ.ಎನ್. ಐತಾಳ್ ತಿಳಿಸಿದರು. ನಂತರ ಗಿಡಮೂಲಿಕೆಗಳಿಂದ ಔಷಧೋಪಚಾರದ ಬಗ್ಗೆ ಮಾಹಿತಿ ಮತ್ತು ಯೋಗಾಸನದ ಬಗ್ಗೆ ಉಪನ್ಯಾಸವನ್ನು ಸ್ಕೌಟರ್ ಬಿ. ಕಿರಣ್ ಕುಮಾರ್, ನೀಡಿದರು. ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಶಿಕ್ಷಕರಾದ ಶ್ರೀ ರಮೇಶ ಚಾತ್ರ ಹಾಗೂ ಶ್ರೀಮತಿ ನಿರ್ಮಲ ಇವರು ಸಹಕರಿಸಿದರು.

# ಉತ್ತರ ಕನ್ನಡ

ಕುಮಟಾ ತಾಲೂಕಿನ ಜನತಾ ವಿದ್ಯಾಲಯ ಧಾರೇಶ್ವರ ಹೈಸ್ಕೂಲಿನಲ್ಲಿ "ಲಾರ್ಡ್ ಬೇಡನ್ ಪೊವೆಲ್ಲರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಭೆಗೆ ಅಧ್ಯಕ್ಷರಾಗಿ ಶಾಲಾ ಮುಖ್ಯಾಧ್ಯಾಪಕರಾದ ಶ್ರೀ ಟಿ.ಡಿ. ಲಮಾಣಿಯವರು ಪೊವೆಲ್ಲರ ಭಾವ ಚಿತ್ರಕ್ಕೆ ದೀಪ ಬೆಳಗಿಸಿ ಬೇರೆ, ಬೇರೆ ಹುತಾತ್ಮರ ಬಗ್ಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶಾಲಾ ಅಭಿವೃದ್ಧಿ ಅಧ್ಯಕ್ಷರಾದ ಶ್ರೀ ಆನಂದು, ಹೆಚ್. ಶಾನಭಾಗರು, ಸ್ಕೌಟ್ಸ್ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಬಿ.ವಿ. ನಾಯ್ಕರು ಭಾಗವಹಿಸಿದ್ದರು. ಹೊನ್ನಾವರ ತಾಲೂಕು ಸ್ಕೌಟ್ಸ್ ಕಾರ್ಯದರ್ಶಿ ಶ್ರೀ ಆರ್. ಎನ್. ನಾಯ್ಕರು ಶಿಸ್ತು ಎಷ್ಟು ಪ್ರಾಮುಖ್ಯತೆ ಹೊಂದಿದೆ ಎನ್ನುವ ಬಗ್ಗೆ ವಿದ್ಯಾರ್ಥಿಗಳಿಗೆ ತಿಳಿಸಿ ಹೇಳಿದರು.

ದಿನಾಂಕ 07-02-09 ರಿಂದ 13-02-09ರ ವರೆಗೆ ಶ್ರೀ ನಿತ್ಯಾನಂದಸ್ವಾಮಿ ಮಠ ಕೆ.ಕೆ.ಹಳ್ಳಿ ಹಳಿಯಾಳ, ಇಲ್ಲಿ ಸರ್ವಶಿಕ್ಷಣ ಅಭಿಯಾನ ಹಾಗೂ ಭಾರತ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ 7 ದಿನ ಮೂಲ ತರಬೇತಿ ನಡೆಯಿತು ಪ್ರಸ್ತುತ ತರಬೇತಿಯನ್ನು ಜಿಲ್ಲೆಯ 27 ಸ್ಕೌಟರ್, ಮತ್ತು 25 ಗೈಡರ್‌ಗಳು ಪಡೆದಿರುತ್ತಾರೆ. ನಾಯಕರುಗಳಾಗಿ ಶ್ರೀ ಬಿ.ಡಿ. ಫರ್ನಾಂಡಿಸ್, ಶ್ರೀಮತಿ ಕೆ.ಕೆ. ಲೀಲಾ ರಾಜ್ಯ, ತರಬೇತಿ ಆಯುಕ್ತರು ಹಾಗೂ ಶ್ರೀಮತಿ ಭಾಗೀರಥಿ, ಶ್ರೀ ಡಿ. ಪವಾರ್ ಎ.ಎಲ್.ಟಿ.(ಗೈ) ಇವರು ನೇರವೇರಿಸಿಕೊಟ್ಟರು.

ದಿನಾಂಕ 14-02-2009 ರಿಂದ 20-02-2009 ರವರೆಗೆ ಅಂಜುಮಾನ್ ಗಂಡು ಮಕ್ಕಳ ಪ್ರೌಢಶಾಲೆ, ಬಟ್ಕಳದಲ್ಲಿ ಮೂಲ ತರಬೇತಿ ನೆರವೇರಿತು. ಜಿಲ್ಲೆಯ 46 ಶಿಕ್ಷಕರು ಸ್ಕೌಟ್ ಮೂಲ ತರಬೇತಿಯನ್ನು ಹಾಗೂ 37 ಶಿಕ್ಷಕಿಯರು ಗೈಡ್ ಮೂಲ ತರಬೇತಿಯನ್ನು ಪಡೆದರು. ಸರ್ವಶಿಕ್ಷಣ ಅಭಿಯಾನ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಆಯೋಜಿಸಿದ ಈ ಮೂಲ ತರಬೇತಿ ನಾಯಕರುಗಳಾಗಿ ಶ್ರಿಮತಿ ಕೆ.ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತರು, ಶ್ರೀ ಜಿ.ಸಿ. ದೇವರಾಜ, ಎಲ್.ಟಿ. (ಸ್ಕೌ) ಶ್ರೀ ಬಿ.ಡಿ. ಪರ್ನಾಂಡಿಸ್ ಎಲ್.ಟಿ. (ಸ್ಕೌ) ಜಿಲ್ಲಾ ತರಬೇತಿ ಆಯುಕ್ತರು ತಮ್ಮ ಕಾರ್ಯವನ್ನು ನೆರವೇರಿಸಿದರು.




ದಿನಾಂಕ 03-03-09 09-03-09 ರವರೆಗೆ ಶ್ರೀ ಭುವನಗಿರಿ ದೇವಸ್ಥಾನ. ನೆಟ್ಟಾಪುರದಲ್ಲಿ ಮೂಲ ತರಬೇತಿಯನ್ನು ಆಯೋಜಿಸಲಾಗಿತ್ತು. ಜಿಲ್ಲೆಯ ಒಟ್ಟು 21 ಶಿಕ್ಷಕರು ಸ್ಕೌಟ್ ತರಬೇತಿಯನ್ನು ಹಾಗೂ 12 ಶಿಕ್ಷಕಿಯರು ಗೈಡ್ ತರಬೇತಿಯನ್ನು ಪಡೆದರು. ನಾಯಕರುಗಳಾಗಿ ಶ್ರೀ ಬಿ.ಕೆ. ಪಾಟೀಲ್ ದಾರವಾಡ ಜಿಲ್ಲಾ ತರಬೇತಿ ಆಯುಕ್ತರು ಹಾಗೂ ಶ್ರೀ ಬಿ.ಡಿ. ಫರ್ನಾಂಡಿಸ್ ಎಸ್.ಟಿ. (ಸ್ಕೌ) ಮತ್ತು ಶ್ರೀಮತಿ ಕೆ.ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತೆಯವರು ತರಬೇತಿ ನೀಡಿದರು.

ಬೇಡನ್ ಪೊವೆಲ್ಲರ ಜನ್ಮ ದಿನಾಚರಣೆಯನ್ನು ಬಹಳ ಅದ್ದೂರಿಯಾಗಿ ಹೊನ್ನಾವರದಲ್ಲಿ ನಡೆಸಲಾಯಿತು. ದಿನಾಂಕ 21-02-2009 ರಂದು ಶರಾವತಿ ಕಲಾ ಮಂದಿರದಲ್ಲಿ ಬೆಳಗ್ಗೆ 8.30ಕ್ಕೆ ಪ್ರಾರ್ಥನೆ ಯೊಂದಿಗೆ ಪ್ರಾರಂಭಗೊಂಡಿದ್ದು, ತಾಲೂಕಿನ 8 ಪ್ರೌಢ ಶಾಲೆಗಳ ಒಟ್ಟು 300 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಹೊನ್ನಾವರ ತಾಲ್ಲೂಕು ತಹಸಿಲ್ದಾರ್‌ರವರಾದ ಶ್ರೀ ಟಿ.ಎಸ್. ಕೃಷ್ಣಮೂರ್ತಿ ರವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸಿದ್ಧರಾಜು, ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀಥೋಮಸ್ ಮ್ಯಾಥ್ಯೂ ಇವರು ಅತಿಥಿಗಳಾಗಿ ಭಾಗವಹಿಸಿದ್ದರು. ನಂತರ ಹೊನ್ನಾವರ ತಾಲ್ಲೂಕು ಮಟ್ಟದ ರ್‍ಯಾಲಿ ನಡೆಯಿತು. ಕಲಾಮಂದಿರದಿಂದ ಪ್ರಾರಂಭವಾದ ಪಥಸಂಚಲನ ನಗರದ ಪ್ರಮುಖ ಬೀದಿಗಳಲ್ಲಿ ಸಂಚರಿಸಿ ಕೊನೆಯಲ್ಲಿ ಮಾರ್ಥೋಮ ಪ್ರೌಢಶಾಲೆಯಲ್ಲಿ ಸಮಾರೋಪಗೊಂಡಿತು. ಸಮಾರೋಪ ಸಮಾರಂಭದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀ ಥೋಮಸ್ ಮ್ಯಾಥ್ಯೂರವರು ಮಕ್ಕಳಿಗೆ ಶುಭ ಕೋರಿದರು. ಪ್ರಸ್ತುತ ರ್‍ಯಾಲಿಯನ್ನು ಹೊನ್ನಾವರ ತಾಲೂಕು ಸ್ಥಳಿಯ ಸಂಸ್ಥೆ ಹಾಗೂ ಜಿಲ್ಲಾ ಸಂಸ್ಥೆ ಜಂಟಿಯಾಗಿ ಆಯೋಜಿಸಿದ್ದು ತಾಲೂಕು ಸಂಸ್ಥೆಯ ಕಾರ್ಯದರ್ಶಿ ಶ್ರೀ ಆರ್.ಎನ್. ನಾಯ್ಕೆ ಹಾಗೂ ಜಂಟಿ ಕಾರ್ಯದರ್ಶಿ ಶ್ರೀ ವಿ.ಜಿ. ನಾಯ್ಕ ಗರುಗಳು ಸಂಘಟಿಸಿ ನೆರವೇರಿಸಿದರು.

## ದಕ್ಷಿಣ ಕನ್ನಡ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಕಬ್ ಮತ್ತು ಬುಲ್ ಬುಲ್ಸ್ ಉತ್ಸವ ಮತ್ತು ಚಿಂತನಾ ದಿನಾಚರಣೆ ಸುರತ್ಕಲ್ ಸ್ಥಳೀಯ ಸಂಸ್ಥೆಯ ಸಹಯೋಗದಿಂದ ದಿನಾಂಕ 21-2-2009 ರಿಂದ 22-2-2009 ರ ವರೆಗೆ ಎನ್.ಐ.ಟಿ.ಕೆ. ಸೂರತ್ಕಲ್ ನಲ್ಲಿ ಕು. ಜೂಲಿಯಾನ ಲಸ್ರಾದೋರವರ ನಾಯಕತ್ವದಲ್ಲಿ ನಡೆಯಿತು. ಎನ್.ಐ.ಟಿ.ಕೆ. ನಿರ್ದೇಶಕರಾದ ಡಾ. ಶ್ರೀನಿಕೇತನಾ ರವರು ದಿನಾಂಕ 21-02-2009ರಂ ದೀಪ ಬೆಳಗಿಸುವುದರ ಮೂಲಕ ಉತ್ಸವವನ್ನು ಉದ್ಘಾಟಿಸಿದರು. ವೇದಿಕೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಐ.ಎ. ಕೈರನ್ನ, ಜಿಲ್ಲಾ ಆಯುಕ್ತೆ (ಗೈಡ್) ಐರಿನ್ ಡಿ. ಕುನ್ಹ, ಉಪಸ್ಥಿತರಿದ್ದರು ಹಾಗೂ ಜಿಲ್ಲಾ ಸಹಾಯಕ ಆಯುಕ್ತರಾದ ಎಸ್.ಎಸ್. ಕರಣಿಕ್ ಅಥಿತಿಗಳನ್ನು ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸುರೇಶ್ ಧನ್ಯವಾದ ನೀಡಿದರು, ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್ ಕಾರ್ಯಕ್ರಮ ನಿರ್ವಹಿಸಿದರು.



ಶ್ರೀ ಉದಯಕುಮಾರ್ ರವರು ಕಬ್ ಮತ್ತು ಬುಲ್ ಬುಲ್ಸ್ ಉತ್ಸವದಲ್ಲಿ ಕಲರವವನ್ನು ಉದ್ಘಾಟಿಸಿದರು. ಜಿಲ್ಲಾ ತರಬೇತಿ ಆಯುಕ್ತೆ ಸುಫಲ ರವರ ನಾಯಕತ್ವದಲ್ಲಿ ಸಮುದ್ರಕಿನಾರೆಯಲ್ಲಿ ಸರ್ವಧರ್ಮ ಪ್ರಾರ್ಥನೆ ನಡೆಯಿತು. ಸ್ಕೌಟರ್ ಶ್ರೀ ಉಮೇಶ್ ರವರ ನಾಯಕತ್ವದಲ್ಲಿ ನಡೆದ ನಗರ ಮೆರವಣಿಗೆಗೆ ಪೋಲಿಸ್ ಅಧಿಕಾರಿ ಶ್ರೀ ನಾಯಕ್ ರವರು ಹಸಿರು ನಿಶಾನೆ ಬೀಸುವುದರ ಮೂಲಕ ಚಾಲನೆ ನೀಡಿದರು. ಎನ್.ಐ.ಟಿ.ಕೆ.ಯ ನಿರ್ದೇಶಕರಾದ ಪ್ರೊ. ಡಾ. ಗೋವಿಂದ್ ರಾಜ್ ರವರು ಅಥಿತಿಗಳಾಗಿ ಭಾಗವಹಿಸುವಿಕೆಯಲ್ಲಿ ಚಿಂತನಾದಿನಾಚರಣೆ ನಡೆಯಿತು.

ಶ್ರೀ ಜಯರಾಂರವರ ಅಧ್ಯಕ್ಷತೆಯಲ್ಲಿ ದಿನಾಂಕ 22-2-2009 ರಂದು ಸಮಾರೋಪ ಸಮಾರಂಭ ನಡೆಯಿತು ವೇದಿಕೆಯಲ್ಲಿ ಜಿಲ್ಲಾ ಆಯುಕ್ತೆ ಗೈಡ್ ಶ್ರೀಮತಿ ಐರಿನ್ ಡಿ. ಕುನ್ಹ, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಪ್ರತಿಮ್ ಕುಮಾರ್ ಉಪಸ್ಥಿತರಿದ್ದರು. ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಎಸ್.ಎಸ್. ಕರಣಿಕ್ ಅತಿಥಿಗಳನ್ನು ಸ್ವಾಗತಿಸಿದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸುರೇಶ್ ಧನ್ಯವಾದ ನೀಡಿದರು. ಸ್ಕೌಟರ್ ಶ್ರೀ ಸುಹಾಸ್ ಕಾರ್ಯಕ್ರಮ ನಿರ್ವಹಿಸಿದರು.

## ಬಾಗಲಕೋಟೆ

**ಸ್ಥಾಪಕರ ದಿನಾಚರಣೆ**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಾಗಲಕೋಟೆ ಆಶ್ರಯದಲ್ಲಿ ವಿಶ್ವ ಸ್ಕೌಟ್ಸ್ ಹಾಗೂ ಚಿಂತನಾ ದಿನಾಚರಣೆಯನ್ನು ದಿನಾಂಕ : 22-02-2009 ರಂದು ಜಿಲ್ಲಾ ಸಂಸ್ಥೆ ಕಛೇರಿಯಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸಂಸ್ಥೆಯ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ ವಹಿಸಿದ್ದರು. ಕಾರ್ಯಕ್ರಮಕ್ಕೆ ಅಗಮಿಸಿದವರನ್ನು ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ ಇವರು ಸ್ವಾಗತ ಮಾಡಿದರು. ಆನಂತರ ಸರ್ವಧರ್ಮ ಪ್ರಾರ್ಥನೆಯನ್ನು ಶ್ರೀಮತಿ ಪದ್ಮಾ ಬಂಡಿಕೇರಿ ಡಿ.ಓ.ಸಿ.(ಜಿ) ಇವರು ನಡೆಸಿಕೊಟ್ಟರು. ನಂತರ ಮುಖ್ಯ ಅತಿಥಿ ಸ್ಥಾನದಿಂದ ಶ್ರೀ ಎನ್.ಎಂ. ಅಗಸಿ ಇವರು ಸ್ಕೌಟ್ಸ್ ಚಳುವಳಿಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ರವರ ಬಗ್ಗೆ ತಿಳಿಸಿದರು. ರಾಷ್ಟ್ರಪತಿ ಪುರಸ್ಕೃತ ರೋವರ್ ಲೀಡರ್ ಹಾಲವರ್ ಮಾತನಾಡಿ ಧೈರ್ಯ ಮುಖಂಡತ್ವದ ಗುಣ ಬೆಳೆಯಲು ಸ್ಕೌಟ್ಸ್ ಸಹಾಯಕಾರಿ ಯಾಗಿದೆ ಎಂದು ಹೇಳಿದರು. ಅನಂತರ ಅಧ್ಯಕ್ಷ ಸ್ಥಾನದಿಂದ ಶ್ರೀ ಜಿ.ಬಿ. ಇದ್ದಲಗಿ, ಜಿಲ್ಲಾ ಆಯುಕ್ತರು ಇವರು ಮಾತನಾಡಿ ಮಕ್ಕಳು ಜೀವನದಲ್ಲಿ ಉತ್ತಮ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕೆಂದು ಹೇಳಿದರು. ಈ ಕಾರ್ಯಕ್ರಮದಲ್ಲಿ ಕಮಲಾತಾಯಿ ಹೆರೆಂಜಲ್ ಕಾಲೇಜಿನ ನೂತನ ರೋವರ್ ಟ್ರುಪ್ ವಿದ್ಯಾರ್ಥಿಗಳು ಹಾಗೂ ಕಾಲೇಜ್ ಉಪನ್ಯಾಸಕರಾದ ಗುಮಾಸ್ತೆ, ದೇಶಪಾಂಡೆ ಇವರು ಭಾಗವಹಿಸಿದ್ದರು. 150ಕ್ಕೂ ಹೆಚ್ಚು ಸ್ಕೌಟ್ಸ್ ಗೈಡ್ಸ್, ಕಬ್, ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಶ್ರೀ ಎ.ಎಸ್. ಶಿವಕುಮಾರ, ಎ.ಎಸ್.ಓ.ಸಿ. (ಎಸ್) ಸಂಯೋಜಕರಾಗಿದ್ದರು.



## ಹಾವೇರಿ

ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ಹಾವೇರಿ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾವೇರಿ. ಇವರ ಆಶ್ರಯದಲ್ಲಿ ಡಯಟ್ ಅನುದಾನದಲ್ಲಿ ದಿನಾಂಕ 26-02-09 ರಿಂದ 04-03-09 ರ ವರೆಗೆ ಸ್ಕೌಟ್ ಮಾಸ್ಟರ್ ಗೈಡ್ಸ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರ ಕೃಷ್ಣ ಮೃಗ ಅಭಯಾರಣ್ಯ ರಾಣಿಬೆನ್ನೂರಿನಲ್ಲಿ 7 ದಿನಗಳ ಕಾಲ ನಡೆಯಿತು. ದಿನಾಂಕ 26-02-09 ರಂದು ಶ್ರೀ ಎ.ಎಂ. ಅಕ್ಕಿ ಪ್ರಾಚಾರ್ಯರು ಡಯಟ್ ಹಾವೇರಿ ಇವರು ಶಿಬಿರವನ್ನು ಉದ್ಘಾಟನೆ ಮಾಡಿದರು. ತರಬೇತಿ ಶಿಬಿರದಲ್ಲಿ 49 ಸ್ಕೌಟ್ಸ್ ಮಾಸ್ಟರ್ 28 ಗೈಡ್ ಕ್ಯಾಪ್ಟನ್‌ರು ಭಾಗವಹಿಸಿದ್ದರು. ದಿನಾಂಕ 01-03-09 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಸಲಹೆ, ಸೂಚನೆ, ನೀಡಿದರು. ಹಾಗೂ ಶ್ರೀ ಎನ್. ಶ್ರೀನಿವಾಸನ್ ಜಂಟಿ ರಾಜ್ಯ ಕಾರ್ಯದರ್ಶಿ ಕೂಡ ಭೇಟಿ ನೀಡಿ ಮಾತನಾಡಿದರು.

ದಿನಾಂಕ 03-03-2009 ರಂದು ಮುಕ್ತಾಯ ಸಮಾರಂಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಅಧ್ಯಕ್ಷರು ಶ್ರೀ ಪಿ.ಎಸ್. ವಸ್ತ್ರದ ಜಿಲ್ಲಾಧಿಕಾರಿಗಳು ಭಾಗವಹಿಸಿ ತರಬೇತಿ ಪಡೆದ ಎಲ್ಲಾ ಶಿಕ್ಷಕ-ಶಿಕ್ಷಕಿಯರು ದಳಗಳನ್ನು ಪ್ರಾರಂಭ ಮಾಡಲು ತಿಳಿಸಿದರು. ಸಭೆಯಲ್ಲಿ ಶ್ರೀ ಸಿ.ಆರ್. ಕೆಂಚರೆಡ್ಡಿ, ಪ್ರಾಚಾರ್ಯರು ಶ್ರೀ ಎಂ.ಎಚ್. ಖಾನ ಹಿರಿಯ ಉಪನ್ಯಾಸಕರು, ಶ್ರೀ ಚಿನ್ನಕಟ್ಟಿ ಉಪನ್ಯಾಸಕರು ಡಯಟ್ ಹಾವೇರಿ ಶ್ರೀಮತಿ ಮಾಧುರಿ ದೇವದರ ಡಿ.ಸಿ.(ಗೈ) ಶ್ರೀಮತಿ ಶೋಭಾ ತಾಯಿ ಕರ್ಜಗಿ ಡಿ.ಹೆಚ್.ಕ್ಯೂ. (ಗೈ) ಶ್ರೀ ಮಮ್ಮದ ಜುಬೇರ ತಹಶೀಲದಾರ ರಾಣಿಬೆನ್ನೂರ ಇವರು ಭಾಗವಹಿಸಿದ್ದರು. ಸ್ಕೌಟ್ ವಿಭಾಗದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ, ಶ್ರೀ ಎಂ.ಆರ್. ಪಾಟೀಲ ಇವರು ವಹಿಸಿದ್ದರು. ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಉಮ, ಮರಿಗೆಂಚಣ್ಣನವರು ವಹಿಸಿದ್ದರು.

ದಿನಾಂಕ 20-02-09 ರಿಂದ 22-02-09 ರ ವರೆಗೆ ರಾಣಿಬೆನ್ನೂರ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ತಾಲೂಕು ಮಟ್ಟದ ಮಕ್ಕಳ ಮೇಳ ನಡೆಯಿತು 3 ದಿನಗಳ ಕಾಲ ನಡೆದ ಮೇಳದಲ್ಲಿ 210 ಸ್ಕೌಟ್ಸ್, 180 ಗೈಡ್ಸ್, 25 ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಮೇಳದಲ್ಲಿ ಪಥಸಂಚಲನ, ಸಾಹಸಮಯ ಚಟುವಟಿಕೆ, ಚಿತ್ರಕಲೆ, ರಂಗೋಲಿಸ್ಪರ್ಧೆ, ಮನರಂಜನೆಯ ಚಟುವಟಿಕೆ, ಸರ್ವಧರ್ಮ ಪ್ರಾರ್ಥನೆ ಇತ್ಯಾದಿ ಚಟುವಟಿಕೆ ನಡೆಸಲಾಯಿತು. ಶ್ರೀಮತಿ ಹೆಚ್.ಎಂ. ಪ್ರೇಮಾ ಬಿ.ಇ.ಓ. ಮತ್ತು ಎ.ಡಿ.ಸಿ. (ಗೈ) ರಾಣಿಬೆನ್ನೂರ, ಶಿಬಿರಾಗ್ನಿಯನ್ನು ಉದ್ಘಾಟನೆ ಮಾಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ.ಹೆಚ್. ಪಾಟೀಲ್ ಸಹ ನಿರ್ದೇಶಕರು ಅಕ್ಷರದಾಸೋಹ ಶ್ರೀಮತಿ ಶೋಭಾ ಕರ್ಜಗಿ ಡಿ.ಹೆಚ್.ಕ್ಯೂ.(ಗೈ) ಭಾಗವಹಿಸಿದ್ದರು. ಶ್ರೀ ಎ.ಎಲ್. ಸೂರಣಗಿ ಮೇಳದ ನಾಯಕರಾಗಿದ್ದರು.

ದಿನಾಂಕ 19-2-2009ರಿಂದ 21-2-2009 ರಂದು ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಬೇಲೂರಿನಲ್ಲಿ ಸ್ಕೌಟ್ಸ್-ಗೈಡ್ಸ್ ಕಬ್ ಬುಲ್‌ಬುಲ್ಸ್ ಮಕ್ಕಳ ತಾಲೂಕು ಮಟ್ಟದ ಮೇಳ (ರ್‍ಯಾಲಿ) ವನ್ನು ನಡೆಸಲಾಯಿತು. ರ್‍ಯಾಲಿಯ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎನ್.ಜಿ. ಬೆನ್ನೂರ ಅಧ್ಯಕ್ಷರು ಎಸ್.ಡಿ.ಎಂ.ಸಿ., ಹೆಚ್.ಪಿ.ಎಸ್. ಬೇಲೂರ ಇವರು ವಹಿಸಿದ್ದರು. ಶ್ರೀ ಕರಿಯಪ್ಪ, ಹುಬ್ಬಳ್ಳಿ ಅಧ್ಯಕ್ಷರು ಗ್ರಾ. ಪಂ. ವೇಲೂರ, ಇವರು ರ್‍ಯಾಲಿಯನ್ನು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಫಕೀರಪ್ಪ ಹಾವನೂರ, ಪಶುಪತಿಗೌಡ, ಪಾಟೀಲ ಗ್ರಾಮ ಪಂಚಾಯತಿ ಉಪಾಧ್ಯಕ್ಷರು ಮತ್ತು ಸದಸ್ಯರು ಶಾಲೆಯ ಪ್ರಧಾನ ಗುರುಗಳಾದ ಶ್ರೀ ಹೆಚ್.ಎನ್. ನಿಟ್ಟೂರಪ್ಪ, ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಶ್ರೀ ಎ.ಬಿ. ಚಂದ್ರಶೇಖರ ಮತ್ತು ಶಿಕ್ಷಣ ಸಂಯೋಜಕರುಗಳಾದ ಶ್ರೀ ಎನ್.ಆರ್. ಹಾವನೂರ ಶ್ರೀ ಪಿ.ವಿ. ರಾಚೋಟಿ ಮಠ ಉಪಸ್ಥಿತರಿದ್ದರು. ಶಿಬಿರದ ಮುನ್ನೋಟವನ್ನು ತಾಲೂಕು ಕಾರ್ಯದರ್ಶಿಗಳಾದ ಶ್ರೀ ಆರ್.ಡಿ. ಹೊಂಬರಡಿ ರವರು ನೀಡಿದರು ಹಾಗೂ ಸ್ವಾಗತವನ್ನು ಮಾಜಿ ಕಾರ್ಯದರ್ಶಿ ಶ್ರೀ ಪಿ.ಬಿ. ಪಾಟೀಲ ಮಾಡಿದರು. ವಂದನಾರ್ಪಣೆಯನ್ನು ಶ್ರೀ ಬಿ.ಎಫ್. ಬಿದರಿ ನಡೆಸಿದರು.

ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಆರ್.ಎಫ್. ಪಾಟೀಲ ಅಧ್ಯಕ್ಷರು ತಾಲೂಕ ಪಂಚಾಯತ ರಾಣಿಬೆನ್ನೂರ ಇವರು ಉದ್ಘಾಟಿಸಿದರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಸಿ.ಸಿ. ಸಣ್ಣಗೌಡ್ರ ನಿರ್ದೇಶಕರು ಕೆ.ಓ.ಎಫ್. ಹಾವೇರಿ ಇವರು ವಹಿಸಿದ್ದರು. ದಿನಾಂಕ 20-2-09 ರಂದು ಮಧ್ಯಾಹ್ನ ಸ್ಕೌಟ್ ಮೋಜಿನ ಜಾತ್ರೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಹೆಚ್.ಎಂ. ಪ್ರೇಮಾ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎಂ.ಹೆಚ್. ಪಾಟೀಲ ಸಹಾಯಕ ನಿರ್ದೇಶಕರು ಅಕ್ಷರ ದಾಸೋಹ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್.ಬಿ. ಗುಂಗರಗೊಪ್ಪ, ದಾನಿಗಳು ಹಾಗೂ ಮರಳು ಗುತ್ತಿಗೆದಾರರು ಹಾಗು ಎಸ್.ಡಿ.ಎಂ.ಸಿ. ಎಲ್ಲಾ ಸದಸ್ಯರು ಉಪಸ್ಥಿತರಿದ್ದರು. ಜಿಲ್ಲಾ ಸ್ಥಾನಿಕ ಉಪಾಧ್ಯಕ್ಷರಾದ ಶ್ರೀ ಸುರೇಶ ಹಾಲ್ಲಿವಾಲ ಉಪಸ್ಥಿತರಿದ್ದರು.

ಸದರಿ ರ್‍ಯಾಲಿಯಲ್ಲಿ 400 ಸ್ಕೌಟ್ಸ್ - ಗೈಡ್ಸ್‌ಗಳು 120 ಕಬ್, ಬುಲ್ ಬುಲ್‌ಗಳು ಹಾಗೂ 70 ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು ಹಾಗು ರ್‍ಯಾಲಿಯ ನಾಯಕರಾಗಿ ಶ್ರೀ ಎ.ಎಲ್.ಎಸ್. ಸೂರಣಗಿ ಡಿ.ಓ.ಸಿ. ಭಾಗವಹಿಸಿದ್ದರು.






ದಿನಾಂಕ 21-02-2009 ರಂದು ಗಂಗಾವತಿ ತಾಲ್ಲೂಕ್ ಸ್ಕೌಟ್ಸ್ ಮತ್ತು ಗೈಡ್ಸ್ ರ್‍ಯಾಲಿಯನ್ನು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಕನಕಗಿರಿಯಲ್ಲಿ ಸ್ಥಳಿಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಲ್ಲಪ್ಪ ಬೆಂಚಮಟ್ಟಿ ನ್ಯಾಯವಾದಿಗಳು ಅಧ್ಯಕ್ಷತೆ ವಹಿಸಿ ಉದ್ಘಾಟಿಸಿದರು. ಶ್ರೀ ಮ.ನಿ.ಪ್ರ. ಚೆನ್ನಮಲ್ಲಿಕಾರ್ಜುನಮಹಾಸ್ವಾಮಿಗಳು ಸಾನ್ನಿಧ್ಯವನ್ನು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕೊಪ್ಪಳ ಜಿಲ್ಲಾ ಪಂಚಾಯತಿ ಅಧ್ಯಕ್ಷರಾದ ಶ್ರೀಮತಿ ಸುಜಾತ ಹನುಮೇಶ್ ನಾಯಕ್, ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀಮತಿ ಸವಿತಾ ಕವಿಬಾಗಿಲ ಮಠ, ಶ್ರೀಮತಿ ಹೇಮಲತಾ ವಸ್ತ್ರದ್ ಜಿಲ್ಲಾ ಆಯುಕ್ತರು (ಗೈ) ಕೊಪ್ಪಳ ಇನ್ನಿತರ ಗಣ್ಯ ವ್ಯಕ್ತಿಗಳು ಉಪಸ್ಥಿತರಿದ್ದರು. ಮುಖ್ಯ ಅತಿಥಿಗಳಾದ ಶ್ರೀಮತಿ ಸವಿತಾ ಕೆ. ಅವರು ಮಾತನಾಡಿ ಹಿಂದುಳಿದ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಶಿಸ್ತು, ಸೇವೆಗೆ ಹೆಸರು ವಾಸಿಯಾದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಇಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳವುದರಿಂದ ಈ ಪ್ರದೇಶದ ಮಕ್ಕಳಲ್ಲಿ ಕ್ರಮ ಶಿಕ್ಷಣ ಬೆಳೆಸುವಲ್ಲಿ ಸಹಕಾರಿಯಾಗುತ್ತದೆ ಎಂದು ಹೇಳಿದರು.

ದಿನಾಂಕ 22-2-2009 ರಂದು ಸಂಜೆ ಸಮಾರೋಪ ಸಮಾರಂಭದ ಸಾನಿಧ್ಯವನ್ನು ಶ್ರೀವೇದ ಮೂರ್ತಿ ಭುವನೇಶ್ವರಯ್ಯ ತಾತನವರು ವಹಿಸಿದ್ದರು ಮತ್ತು ಅಧ್ಯಕ್ಷತೆಯನ್ನು ಮಾನ್ಯಶ್ರೀ ಮೋಹನ್ ಚಕ್ರವರ್ತಿ ಜಿಲ್ಲಾಧಿಕಾರಿಗಳು, ಕೊಪ್ಪಳ ಇವರು ವಹಿಸಿದ್ದರು ಹಾಗೂ ಮುಖ್ಯ ಅಥಿತಿಗಳಾಗಿ ಶ್ರೀ ಬಾಲಪ್ಪ ಹೂಗಾರ್ ಸದಸ್ಯರು ಜಿಲ್ಲಾ ಪಂಚಾಯತ್ ಕೊಪ್ಪಳ, ಶ್ರೀಮತಿ ಗಂಗಮ್ಮ ಗಂಗಣ್ಣ ಸಮಗಂಡಿ ತಾಲೂಕ ಪಂಚಾಯಿತಿ ಗಂಗಾವತಿಯ ಸದಸ್ಯರು; ಮಾನ್ಯ ಶ್ರೀ ದೇವಪ್ಪ ತೋಳದ ಗ್ರಾಮ ಪಂಚಾಯಿತಿ ಅಧ್ಯಕ್ಷರು ಕನಕಗಿರಿ, ಮಾನ್ಯ ಡಾ॥ ದೊಡ್ಡಯ್ಯ ಸ್ವಾಮಿ ಅವರಟಗಿ ಮಠ ನಿರ್ದೇಶಕರು ಎ.ಪಿ.ಎಂ.ಸಿ. ಹಾಗೂ ಶ್ರೀ ಆರ್.ಟಿ. ನಾಯ್ಕ ಶಿಕ್ಷಣ ಸಂಯೋಜಕರು, ಕನಕಗಿರಿ ವಲಯ ಇತರರು ಉಪಸ್ಥಿತರಿದ್ದರು. ಈ ಸಮಾರಂಭದಲ್ಲಿ ಸ್ಕೌಟ್ ಜನಕ ಲಾರ್ಡ್ ಬೆಡನ್ ಪೊವೆಲ್ ರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಈ ರ್‍ಯಾಲಿಯಲ್ಲಿ ಸುಮಾರು 65 ದಳಗಳ 460ಕ್ಕೂ ಹೆಚ್ಚು ಸ್ಕೌಟ್-ಗೈಡ್ ಮತ್ತು ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ದಿನಾಂಕ 23-2-2009 ರಂದು ಶ್ರೀ ವೇದಮೂರ್ತಿ ಗವಿಸಿದ್ಧಯ್ಯ ತಾತನವರು, ಶ್ರೀ ಮೌಲ್ವಿ ಅಂಜದ್ ರಜ಼ಾಕ್, ಶ್ರೀ ವಿಲಿಯಂ ಇವರುಗಳ ಸಾನ್ನಿಧ್ಯದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಊರಿನ ಗುರುಹಿರಿಯರು ಹಾಗೂ ಆ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಈಶಪ್ಪ ಅವರ ಅಧ್ಯಕ್ಷತೆಯಲ್ಲಿ ನೆರವೇರಿಸಲಾಯಿತ.



ಬೇಡನ್ ಪೊವೆಲ್ ರವರ ಜನ್ಮ ದಿನಾಚರಣೆ ಮತ್ತು ಚಿಂತನಾ ದಿನಾಚರಣೆಯ ಕಾರ್ಯಕ್ರಮವನ್ನು ನಗರದ ಸರಸ್ವತಿ ವಿದ್ಯಾಮಂದಿರ ಶಾಲೆ ಹೊಸ ರಾಘವೇಂದ್ರ ಕಾಲನಿಯಲ್ಲಿ ಗುಲಬರ್ಗಾದಲ್ಲಿ ದಿ. 22-02-2009 ರಂದು ಏರ್ಪಡಿಸಲಾಗಿತ್ತು. ಬೆಳಗ್ಗೆ 8.00 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ಯೊಂದಿಗೆ ಪ್ರಾರಂಭವಾದ ಈ ಕಾರ್ಯಕ್ರಮಕ್ಕೆ ಮಾನ್ಯ ಶ್ರೀ ಶಿವರಾಜ-ಭಾನಿಗಿ, ವಿರೋಧ ಪಕ್ಷದ ನಾಯಕರು ಜಿಲ್ಲಾ ಪಂಚಾಯತಿ, ಗುಲಬರ್ಗಾ ರವರು ಉದ್ಘಾಟಕರಾಗಿ ಆಗಮಿಸಿದ್ದರು. ಶ್ರೀ ವಜ್ರಕುಮಾರ-ಕಿವಡೆ, ಶ್ರೀ ಗುರುರಾಜ-ಕುಲಕರ್ಣಿ, ಅಧ್ಯಕ್ಷರು ಶ್ರೀ ಗಣೇಶ ವಿದ್ಯಾ ಸಂಸ್ಥೆ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಡಾ॥ ಶೀಲಾ ಸಿದ್ರಾಮ ರಾಜ್ಯ ಸಹಾಯಕ ಆಯುಕ್ತರು (ಗೈ) ಗುಲಬರ್ಗಾ ವಿಭಾಗ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀ ಎಸ್.ಪಿ. ಸುಳ್ಳದ್ ಅವರು ಸ್ವಾಗತಿಸಿದರು. ಶ್ರೀಮತಿ ಶರಣಮ್ಮ, ಜಿಲ್ಲಾ ಆಯುಕ್ತರು, (ಗೈ) ಉಪಸ್ಥಿತರಿದ್ದರು. ಶ್ರೀ ವೀರಭದ್ರಯ್ಯ ಜಿ.ಸಂ.ಅ. ನಿರೂಪಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್, ಕಬ್, ಬುಲ್ ಬುಲ್ಸ್‌ಗಳು ವಿವಿಧ ಸ್ಪರ್ಧಾತ್ಮ ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ಒಟ್ಟು 300 ಸ್ಕೌಟ್ಸ್ ಗೈಡ್ಸ್, ಕಬ್ಸ್, ಬುಲ್‌ಬುಲ್ಸ್‌ಗಳು ಭಾಗವಹಿಸಿ ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.






ದಿನಾಂಕ 07-02-2009 ರಂದು ಶನಿವಾರ ಬೆಳಗ್ಗೆ 11.00 ಗಂಟೆಗೆ ನರಗುಂದ ಶಹರ ವಲಯದ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ 60 ಗೈಡ್ಸ್ ಮತ್ತು 140 ಸ್ಕೌಟ್ಸ್‌ಗಳು ನರಗುಂದ ಪುರಸಭೆಯ ಮುಂದೆ ಸೇರಿದರು. ಪುರಸಭೆಯ ಉಪಾಧ್ಯಕ್ಷರಾದ ಶ್ರೀ ವಾಸು-ಜೋಗಣ್ಣವರ ಇವರು ಸ್ಕೌಟ್ ಧ್ವಜವನ್ನು ಎತ್ತಿ ಹಿಡಿಯುವುದರ ಮೂಲಕ ಸ್ವಚ್ಛತಾ ಕಾರ್ಯಕ್ರಮವನ್ನು ಉದ್ಘಾಟಿಸಿದರು. ನಂತರ ಅಲ್ಲಿಂದ ನರಗುಂದ ಗುಡ್ಡದ ಬದಿಯಲ್ಲಿರುವ ಐತಿಹಾಸಿಕ ಶ್ರೀ ಸಿದ್ಧೇಶ್ವರ ದೇವಸ್ಥಾನಕ್ಕೆ ನಡೆಯುತ್ತಾ, ದಾರಿಯಲ್ಲಿ ಬಿದ್ದ ಕಸ, ಕಡ್ಡಿ, ಮುಳ್ಳು ಕಲ್ಲುಗಳನ್ನು ಆಚೆಗೆ ತೆಗೆದುಹಾಕಲಾಯಿತು. ಈ ದೇವಸ್ಥಾನದ ಮುಂದೆ ಸ್ವಚ್ಛಗೊಳಿಸಲಾಯಿತು. ಆನಂತರ ನೆರಳಿನಲ್ಲಿ ಕುಳಿತು ಸ್ವಚ್ಛತೆ ಕುರಿತು ಜಾಗೃತಿಯನ್ನು ಮೂಡಿಸಲು ಕಾರ್ಯಕ್ರಮ ಮಾಡಲಾಯಿತು.

ದಿನಾಂಕ 9-3-2009 ರಿಂದ 15-3-2009ರ ವರೆಗೆ ಮೂಲ ತರಬೇತಿ ಶಿಬಿರವು ಶ್ರೀ ಬಸವೇಶ್ವರ ಕಲ್ಯಾಣ ಮಂಟಪ ಹರ್ತಿ ತಾಲೂಕು ಜಿಲ್ಲಾ ಗದಗ ಇಲ್ಲಿ ಜರುಗಿತು. 56 ಶಿಕ್ಷಕರು 35 ಶಿಕ್ಷಕಿಯರು ಭಾಗವಹಿಸಿದ್ದರು. ಸ್ಕೌಟ್ ವಿಭಾಗಕ್ಕೆ ಶ್ರೀ ಜಿ.ಎ. ನರಗುಂದ ಎಲ್.ಟಿ.(ಸ್ಕೌ) ಶ್ರೀ ಎ.ಎಲ್. ಸೂರಣಗಿ ಎ.ಎಲ್.ಟಿ. (ಸ್ಕೌ) ನಾಯಕರಾಗಿ ಆಗಮಿಸಿದ್ದರು. ಗೈಡ್ ವಿಭಾಗಕ್ಕೆ ಶ್ರೀಮತಿ ಪ್ರಭಾಲೋಂಡೆ ಎಲ್.ಟಿ. (ಗೈ) ನಾಯಕಿಯಾಗಿದ್ದರು.

ಶಿಬಿರದ ಅವಧಿಯಲ್ಲಿ ಶ್ರೀ ಶರೀಫ್ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಎನ್.ಹೆಚ್. ಕಟಕದೊಂಡ ಉಪನಿರ್ದೇಶಕರು ಗದಗ ಶ್ರೀ ಎಸ್.ಎನ್. ಖಾಜಿ ಪ್ರಾಚಾರ್ಯರು ಡಯಟ್ ಗದಗ. ಶ್ರೀ ಎ.ಎಂ. ವಡಗೇರಿ, ಬಿ.ಇ.ಓ. ಗದಗ ಗ್ರಾಮೀಣವಲಯ ಶ್ರೀ ಐ.ಬಿ. ಬೆನಕಪ್ಪ, ಬಿ.ಇ.ಓ. ಗದಗ, ಶಹರವಲಯ ಸಂದರ್ಶನ ನೀಡಿದರು.

ದಿನಾಂಕ 9-3-2009 ರಂದು ಉದ್ಘಾಟನಾ ಸಮಾರಂಭ ಜರುಗಿತು. ಶ್ರೀ ಎಂ.ಎಂ. ಲೋಂಡೆ, ಧಾರವಾಡ ಇವರು ಉದ್ಘಾಟಿಸಿದರು. ಶ್ರೀ ಎನ್.ಹೆಚ್. ಕಟಕದೊಂಡ ಅಧ್ಯಕ್ಷತೆಯಲ್ಲಿ ಜರುಗಿದ ಸಮಾರಂಭಕ್ಕೆ ಶ್ರೀ ಡಿ.ವಿ. ಬೆಲ್ಲದ, ಶ್ರೀ ಎ.ಎಂ. ವಡಗೇರಿ, ಶ್ರೀ ಎಸ್.ಟಿ. ಬ್ಯಾಕೊಡ, ಶ್ರೀ ಬಂದಕ್ಕನವರ, ಶ್ರೀ ವಿ.ಎಂ. ಹಿರೇಮಠ, ಶ್ರೀ ಸೋಮರೆಡ್ಡಿ, ಎಸ್.ಡಿ.ಎಂ.ಸಿ. ಅಧ್ಯಕ್ಷರು ಹರ್ತಿ ಭಾಗವಹಿಸಿದ್ದರು. ದಿನಾಂಕ 13-3-2009ರಂದು ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಎನ್. ಶ್ರೀನಿವಾಸನ್ ರವರು ಶಿಬಿರಕ್ಕೆ ಭೇಟಿ ನೀಡಿ ಉಪನ್ಯಾಸ ನೀಡಿದರು.

ದಿನಾಂಕ 1-3-2009 ಮತ್ತು 2-3-2009 ರಂದು ಗದಗ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್-ಗೈಡ್ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರವು ಶ್ರೀ ಬಸವೇಶ್ವರ ಕಲ್ಯಾಣ ಮಂಟಪ ಹರ್ತಿಯಲ್ಲಿ ಜರುಗಿತು. 32 ಸ್ಕೌಟ್ಸ್ ಮತ್ತು 11 ಗೈಡ್ಸ್ ಭಾಗವಹಿಸಿದ್ದರು. ರಾಜ್ಯ ಸಂಸ್ಥೆಯಿಂದ ನಿಯೋಜಿಸಲ್ಪಟ್ಟ. ಶ್ರೀ ಜಿ.ಎ. ನರಗುಂದ ಎಲ್.ಟಿ. ಮತ್ತು ಶ್ರೀಮತಿ ಪ್ರಭಾ ಲೋಂಡೆ, ಎಲ್.ಟಿ. ಪರೀಕ್ಷಕರಾಗಿ ಆಗಮಿಸಿದ್ದರು. ಶಿಬಿರ ಪ್ರಾರಂಭೋತ್ಸವದ ಅಧ್ಯಕ್ಷತೆಯನ್ನು ಶ್ರೀಮತಿ ಸುಮಾ, ಗದಗ ಜಿಲ್ಲಾ ಆಯುಕ್ತರು (ಗೈಡ್) ವಹಿಸಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಪಿ.ಎಮ್. ಬಂದಕ್ಕನವರ ಉಪಾಧ್ಯಕ್ಷರು ಗ್ರಾಂ. ಪಂ. ಹರ್ತಿ ಇವರನ್ನು ಸನ್ಮಾನಿಸಲಾಯಿತು. ಶ್ರೀ ಎಸ್.ಎಸ್. ಛಾರ್ಬೆ ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಎಂ.ಎಸ್. ಹಿರೇಮಠ, ಜಿಲ್ಲಾ ಸ್ಕೌಟರ್ ಪ್ರತಿನಿಧಿ. ಶ್ರೀ ಬಿ.ಡಿ. ಸೋಮಣ್ಣರೆಡ್ಡಿ, ಶ್ರೀ ಎಂ.ಬಿ. ಪಾಟೀಲ ಶ್ರೀ ಕುಲಕರ್ಣಿ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಜಿ.ಎ. ಹುಲಸೂರ ಜಂಟಿಜಿಲ್ಲಾ ಕಾರ್ಯದರ್ಶಿ ವಂದನಾರ್ಪಣೆ ಗೈದರು.

ದಿನಾಂಕ 21-02-2009 ರಿಂದ 24-02-09ರ ವರೆಗೆ ಶ್ರೀ ಫಲಾಹಾರ ಶಿವಯೋಗಿಶ್ವರ ಸಂಯುಕ್ತ ಪ.ಪೂ. ಮಹಾವಿದ್ಯಾಲಯ ಸುರೇಬಾನದಲ್ಲಿ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ರಾಮದುರ್ಗ ಹಾಗೂ ಶ್ರೀ ಫ.ಶಿ. ಶಿಕ್ಷಣ ಸಮಿತಿಯ ಸಂಯುಕ್ತ ಆಶ್ರಯದಲ್ಲಿ ಸ್ಕೌಟ್ ಸಂಸ್ಥಾಪಕರಾದ "ಲಾರ್ಡ್ ಬೆಡನ್ ಪೊವೆಲ್" ರ ಜನ್ಮ ದಿನಾಚರಣೆ ಹಾಗೂ "ಪಟಾಲಂ ನಾಯಕರ ತರಬೇತಿ ಶಿಬಿರ" ಯಶಸ್ವಿಯಾಗಿ ಜರುಗಿತು. ಈ ಶಿಬಿರದಲ್ಲಿ 160 ಶಿಬಿರಾರ್ಥಿಗಳು 40, ಜನ ಸ್ಕೌಟ್, ಗೈಡ್ ಶಿಕ್ಷಕ/ಶಿಕ್ಷಕಿಯರು ಹಾಜರಿದ್ದರು. ಶಿಬಿರ ನಾಯಕರಾಗಿ ಶ್ರೀ ಡಿ.ಬಿ. ಅತ್ತಾರವರು ಹಾಗೂ ಶ್ರೀಮತಿ ಎನ್.ಎನ್. ಕಾರ್ಯನಿರ್ವಹಿಸಿದರು. ರವಿವಾರ ದಿನಾಂಕ 22-02-2009 ಸಂಸ್ಥಾಪಕರ ಭಾವಚಿತ್ರ ಮೆರವಣಿಗೆಯೊಂದಿಗೆ ಜನ್ಮ ದಿನಾಚರಣೆ ಕಾರ್ಯಕ್ರಮ ಜರುಗಿತು.

ಕಾರ್ಯಕ್ರಮದ ದಿವ್ಯ ಸನ್ನಿದಾನವನ್ನು ಶ್ರೀ ಮ.ನಿ.ಪ್ರ.ಸ.ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು ವಹಿಸಿದ್ದರು. ಅಧ್ಯಕ್ಷತೆಯನ್ನು ಮಾನ್ಯ ಶ್ರೀ ಅಶೋಕ್ ಪಟ್ಟಣ ಶಾಸಕರು, ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಬಿ.ಹೆಚ್. ಮಿಲ್ಲಾನಟ್ಟಿ ಬಿ.ಇ.ಓ. ರಾಮದುರ್ಗ, ಶ್ರೀ ವಿ.ಎನ್. ಗೋಡಕಿಂಡಿ, ಉಪಾಧ್ಯಕ್ಷರು, ಭಾ.ಸ್ಕೌ.ಗೈ. ರಾಮದುರ್ಗ, ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ, ಭಾ.ಸ್ಕೌ.ಗೈ. ಬೆಳಗಾವಿ. ಶ್ರೀ ಆರ್.ಪಿ. ಕಮ್ಮಾರ, ನಿರ್ದೇಶಕರು ಫ.ಶಿ.ಶಿ. ಸಮಿತಿ, ಶ್ರೀ ಎಸ್.ಎಸ್. ಬೂದಿಹಾಳ, ನಿರ್ದೇಶಕರು ಫ.ಶಿ.ಶಿ. ಸಮಿತಿ, ಶ್ರೀ ಎಸ್.ಎಸ್. ಹವಾಲ್ದಾರ್, ಪ್ರಾಚಾರ್ಯರು, ಶ್ರೀ ಎ.ಎಸ್. ಕುಮಟೆ, ಉಪಪ್ರಾಚಾರ್ಯರು, ಶ್ರೀಮತಿ ರೂಪಾ. ವ್ಹಿ. ಯಲಿಗೋಡ, ಉಪಾಧ್ಯಕ್ಷರು, ತಾ. ಪಂ. ರಾಮದುರ್ಗ ಶ್ರೀ ಅಶೋಕ ಗಾಣಿಗೇರ ಸದಸ್ಯರು ತಾ. ಪಂ. ರಾಮದುರ್ಗ, ಶ್ರೀ ನಾರಾಯಣಶೆಟ್ಟಿ ಎಸ್.ಓ.ಸಿ. (ಸ್ಕೌ) ಭಾಗವಹಿಸಿದ್ದರು. ಶ್ರೀ ಬಿ.ಸಿ. ಬಿದರಿಯವರು ಕಾರ್ಯಕ್ರಮ ನಿರೂಪಿಸಿದರು. ಶ್ರೀ ವೈ.ವಿ. ಗೊರವನಕೊಳ್ಳ, ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ಆರ್.ಎಸ್. ವಸನದ ಎ.ಡಿ.ಸಿ. ಹಾಗೂ ದೈಹಿಕ ಶಿಕ್ಷಣಾಧಿಕಾರಿಗಳು ಪ್ರಾಸ್ತಾವಿಕ ಮಾಡನ್ನಾಡಿದರು. ಶ್ರೀ ಎಂ.ಎನ್. ದಣ್ಣವರ ಎಲ್ಲರನ್ನು ವಂದಿಸಿದರು.



## ರಾಮನಗರ

ದಿನಾಂಕ 26-02-2009 ರಂದು ರಾಮನಗರ ತಾಲೂಕು ಸಂಸ್ಥೆಯ ಆಶ್ರಯದಲ್ಲಿ ವಿಶ್ವ ಸ್ಕೌಟ್ ಮತ್ತು ಚಿಂತನಾ ದಿನಾಚರಣೆಯನ್ನು ಗುರುಭವನದಲ್ಲಿ ಏರ್ಪಡಿಸಲಾಗಿತ್ತು. ಪ್ರತಿ ಶಾಲೆಯಿಂದ 8 ಸ್ಕೌಟ್ಸ್ ಮತ್ತು 8 ಗೈಡ್ಸ್‌ಗಳಂತೆ 300 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಚಿಂತನಾ ದಿನದ ಉದ್ಘಾಟನೆಯನ್ನು ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಸಾರ್ವಜನಿಕ ಸಂಪರ್ಕ) ನೆರವೇರಿಸಿ ಲಾರ್ಡ್ ಬೇಡನ್ ಪೊವೆಲ್‌ರ ಜೀವನದ ಬಗ್ಗೆ ಮತ್ತು ಈ ಹಿಂದೆ ಬೆಂಗಳೂರು ಗ್ರಾಮಾಂತರ ಜಿಲ್ಲಾ ರಾಜ್ಯದಲ್ಲಿಯೇ ಸ್ಕೌಟ್/ಗೈಡ್ ಚಟುವಟಿಕೆ ತರಬೇತಿ ಶಿಬಿರಗಳು ಇತ್ಯಾದಿಯಲ್ಲಿ ಉತ್ತಮವಾಗಿ ಕೆಲಸ ನಿರ್ವಹಿಸಿತ್ತು. ಅದರಂತೆ ಈಗಿನ ಸ್ಥಳೀಯ ಪದಾಧಿಕಾರಿಗಳು ಸ್ಕೌಟಿಂಗ್/ಗೈಡಿಂಗ್ ಚಟುವಟಿಕೆ ಹೆಚ್ಚಾಗುವಂತೆ ಶ್ರಮಿಸಲು ಕರೆನೀಡಿದರು. ಶ್ರೀ ಎಂ.ಪಿ. ಮಾದೇಗೌಡರು, ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರು ಮಾತನಾಡುತ್ತಾ ತಾಲ್ಲೂಕಿನ ಎಲ್ಲಾ ಶಾಲೆಗಳಲ್ಲಿ ಜೂನ್ ತಿಂಗಳಿಂದ ಸ್ಕೌಟಿಂಗ್/ಗೈಡಿಂಗ್ ಪ್ರಾರಂಭಿಸಲು ಪ್ರಾಥಮಿಕ ಹಾಗೂ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರಿಗೆ ಸ್ಕೌಟಿಂಗ್ ಬಗ್ಗೆ ಮಾಹಿತಿ ಶಿಬಿರವನ್ನು ಏರ್ಪಡಿಸುತ್ತಿದ್ದೇನೆ ಎಂದು ತಿಳಿಸಿದರು. ಶ್ರೀ ಪಿ. ಸೋಮಲಿಂಗಯ್ಯ ಶ್ರೀ ಶಂಕರೇಗೌಡರು ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು ಶ್ರೀಮತಿ ಪುಟ್ಟ ಗೌರಮ್ಮನವರು ಅಧ್ಯಕ್ಷತೆ ವಹಿಸಿದ್ದರು. ಸಂಜೆ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎ.ಎಸ್. ಸೋಮಶೇಖರ್, ಛೇರ್ಮನ್ ರವರು ವಹಿಸಿದ್ದರು.

ಸಮಾರೋಪ ಭಾಷಣವನ್ನು ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾದ ಶ್ರೀ ಟಿ.ವಿ. ಮಂಜುನಾಥಾಚಾರ್ ಮಾಡಿದರು. ಸಮಾರಂಭದಲ್ಲಿ ತಾಲ್ಲೂಕಿನ ಎಲ್ಲಾ ಸ್ಕೌಟರ್ಸ್/ಗೈಡರ್ಸ್ ಮತ್ತು ಸಂಸ್ಥೆಯ ಪದಾಧಿಕಾರಿಗಳಿಗೆ ನೆನಪಿನ ಕಾಣಿಕೆಯನ್ನು ಕರ್ನಾಟಕ ರಕ್ಷಣಾ ವೇದಿಕೆ (ಸ್ವಾಭಿಮಾನಿ ಬಣ್ಣ) ದ ರಾಜ್ಯಾಧ್ಯಕ್ಷರಾದ ಶ್ರೀ ಪಿ. ಕೃಷ್ಣೇಗೌಡ್ರು ಮತ್ತು ಶ್ರೀ ಸಿ. ಶಿವಕುಮಾರ, ಜಿಲ್ಲಾಧ್ಯಕ್ಷರು ನೀಡಿದರು. ಸಮಾರಂಭದಲ್ಲಿ ಶ್ರೀಮತಿ ಸೌಮ್ಯ ಕುಮಾರ್ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಟಿ.ವಿ. ಮೂರ್ತಿ ಕಾರ್ಯದರ್ಶಿಯವರು ವ್ಯವಸ್ಥೆಯನ್ನು ಮಾಡಿದ್ದರು.

ದಿನಾಂಕ 28-02-2009ರಂದು ವಕೀಲರ ಸಂಘ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ, ರಾಮನಗರ ಇವರ ಸಂಯುಕ್ತ ಆಶ್ರಯದಲ್ಲಿ ಉಚಿತ ಕಾನೂನು ಸಲಹೆ ಮಾಹಿತಿ ಶಿಬಿರವನ್ನು ರಾಮನಗರದ 250 ಸರ್ಕಾರಿ/ಖಾಸಗಿ / ಅನುದಾನ ರಹಿತ ಪ್ರಾಥಮಿಕ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರು ಮತ್ತು ಬಿ.ಆರ್.ಸಿ., ಸಿ.ಆರ್.ಸಿ. ಯ ಸಮನ್ವಯಾಧಿಕಾರಿಗಳಿಗೆ ಏರ್ಪಡಿಸಿದ್ದರು. ಇದೇ ಸಂದರ್ಭದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು (ಸಾರ್ವಜನಿಕ ಸಂಪರ್ಕ) ಬೆಂಗಳೂರು ಇವರು ನೀಡಿದರು. ನಂತರ ಹಾಜರಿದ್ದ ಶಾಲೆಗಳ ಮುಖ್ಯೋಪಾಧ್ಯಾಯರಿಗೆ ತಮ್ಮ ತಮ್ಮ ಶಾಲೆಗಳಲ್ಲಿ ಸ್ಕೌಟ್/ಗೈಡ್ ದಳಗಳನ್ನು ಪ್ರಾರಂಭಿಸಲು ಒಬ್ಬೊಬ್ಬ ಶಿಕ್ಷಕ/ಶಿಕ್ಷಕಿಯರನ್ನುನಿಯೋಜಿಸಲು ವಿನಂತಿಸಿದರು. ಸಭೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಪಿ. ಮಾದೇಗೌಡರು ಜೂನ್ ತಿಂಗಳಲ್ಲಿ ರಾಮನಗರ ತಾಲೂಕಿನ ಎಲ್ಲಾ ಶಾಲೆಗಳ ಪ್ರಧಾನ ಗುರುಗಳಿಗೆ ಸ್ಕೌಟಿಂಗ/ಗೈಡಿಂಗ್ ಬಗ್ಗೆ ಮಾಹಿತಿ ಶಿಬಿರವನ್ನು ಏರ್ಪಡಿಸುತ್ತೇವೆ. ತಾವೆಲ್ಲರೂ ತಪ್ಪದೇ ಹಾಜರಾಗಬೇಕೆಂದು ತಿಳಿಸಿದರು.

## Bangalore South

Ankith S. Rajya Puraskar Scout New Horizon School Scout Troop, Indiranagar has been Awarded the Best out going student Award for the year 2008-09. He attended the 20th World Scout Jamboree held at London. The Management of New Horizon School presented a cash Award of Rs. 10,000/- (Rupees Ten Thousand) to Scout Ankith S.



Congratulations



Sri M.M. Bebarta, officer-in-charge, Rover Scouts, HAL Rover crew cutting cake in commemoration with the Founders Day Celebration. Sri M.K. Khan, DCC., B'lore South and Rover Scout Leader Sri Nanda Kumar are also seen.

## Bangalore North

### Foundation Stone Laid for District Headquarters Building



Dr. Ashwathnarayan, Hon'ble Member of Karnataka Legislative Assembly, Malleswaram Constituency and Patron, District Association, Bangalore North laid the foundation stone for the District Headquarters building on 15th February 2009 at the premises of Sri Chamundi Scout Group, Malleswaram. Sri M. Neelaiah, President, District Association and Former Deputy Director of Public Instruction presided over the function. Smt. Ravi Wesley, State Commissioner (Guides) Sri Hanuma Reddy, President Sri Chamundi Scout Group, Sri K. Narasimha Murthy, Group Leader (Scout) Officials from the State and District Headquarters were present. Sri Premkumar, District Commissioner (S) welcomed the gatherings. Sri B.K. Sheshadri, District Secretary proposed the vote of thanks. In his address Dr. Aswathnarayanan MLA, said he will give all support for the construction of the building.

### Founders Day

Shivajinagar Local Association Celebrated the Founders Day and Thinking Day on 21st February 2009 at St. Mary's Public School. Mrs. Helcha Arunkumar Principal presided over the programme. Drawing and painting competation was held and prizes were distributed to the winners. Sri T.S. Lucas, State Commissioner (S) visited the programme. Smt. B. Revathy District Training Commissioner (G). co-ordinated the programme. Officials from the Local Association were present.

### Badge Work Camp

Badge work camp for Scouts and Guides was held at M.E.S. Kishore Kendra Public School. Vidyaranyapura on 21st and 22nd Feb 2009. 350 cubs, Bulbuls, Scouts and Guides attended the camp.

Founders Day and Thinking Day was also observed. Group activities like Rangoli, Drawing, Colouring Games were held. Sri Siddappa, Traffic Police conducted a class on Traffic Rules and safety on Roads. Dr. Ketham from Ketham Hospital presented a demonstration on First Aid.

Sri T.S. Lucas, State Commissioner (S) was the Chief Guest. Sri Premkumar, Dist. Commissioner (S), Smt. B. Revathy, DTC (G) were also present. The Camp Fire was declared open by Prof. Ranganayaki, Principal MES, College. Prof. B.R. Subba Rao PU College. Sri N. Srinivasan, Joint State Secretary (S), Sri B.K. Sheshadri, Dist. Secretary were also present.

## BELLARY

### Founders Day Observed

The Founders' Day was observed on 22nd Feb 2009 at the premises of Dist. Headquarters at Bellary. Sri K. Veeresh, Asst. Professor, Bellary Engineering College presided over the function. 200 scouts and Guides from Bellary city units attended the Programme. Scouts & Guides spoke about B.P. Life. All faith prayer & culture activities was organised.

Scouters and Guiders were also present. Sri Mahaboob Basha, DOC (S) co-ordinated the programme .



# ಬಿಡಿಎ–ಆಧುನಿಕ ಬೆಂಗಳೂರಿನ ಶಿಲ್ಪಿ

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021 ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ಔದ್ಯಮಿಕ - ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯ ಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ, ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ ಜನ್ಮತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ತನ್ನ 30 ವರ್ಷಗಳ ಸಾರ್ಥಕ ಜೀವನಾವಧಿಯಲ್ಲಿ ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರಸ್ತಂಭವಾಗಿ ಬೆಳೆದು ನಿಂತಿದೆ.

## ವಸತಿ ಸೌಲಭ್ಯ ಪೂರೈಕೆಯಲ್ಲಿ ಬಿಡಿಎ ಇಷ್ಟು ವರ್ಷಗಳಲ್ಲಿ ಸಾಧಿಸಿರುವ ಅಪೂರ್ವ ಸಾಧನೆಗಳು.

- **ನಿರ್ಮಿಸಿರುವ ಬಡಾವಣೆಗಳು** - ಮಲ್ಲೇಶ್ವರಂ, ಬಸವನಗುಡಿ, ಮೊದಲ್ಗೊಂಡು ವಿಶ್ವದ ಅತಿದೊಡ್ಡ ಮತ್ತು ಅತ್ಯುತ್ತಮ ಯೋಜಿತ ಬಡಾವಣೆಗಳಾದ ಜಯನಗರ, ಕೋರಮಂಗಲ, ಬಿಟಿಎಂ, ಎಚ್‌ಎಸ್‌ಆರ್, ಆರ್‌ಎಂವಿ, ಇಂದಿರಾನಗರ, ಎಚ್‌ಬಿಆರ್, ವಿಜಯನಗರ, ಎಚ್‌ಆರ್‌ಬಿಆರ್, ಬಿಎಸ್‌ಕೆ ಬಡಾವಣೆಗಳು ಇತ್ತೀಚಿನ ಅರ್ಕಾವತಿ ಬಡಾವಣೆಯವರೆಗೆ ಸುಮಾರು 62 ಬಡಾವಣೆಗಳನ್ನು ರೂಪಿಸಿದೆ. ಇದರ ಮೂಲಕ ಸುಮಾರು 2 ಲಕ್ಷ ವಸತಿ ನಿವೇಶನಗಳನ್ನು ಸೃಷ್ಟಿಸಿದೆ.
- ನಗರದ ಸಮತೋಲನವಾದ ಬೆಳವಣಿಗೆಗೆ ಮತ್ತು ಸಾಂಸ್ಥಿಕ ಚಟುವಟಿಕೆಗಳಿಗಾಗಿ ನಾಗರಿಕರ ಸೌಲಭ್ಯದ (ಸಿಎ) ನಿವೇಶನಗಳನ್ನು ರೂಪಿಸಿ ನಗರಕ್ಕೆ ಒಂದು ಹೊಸ ರೂಪ ಕೊಟ್ಟಿದೆ. ನ್ಯಾಷನಲ್ ಪಬ್ಲಿಕ್ ಸ್ಕೂಲ್, ಸೋಫಿಯಾ ಹೈಸ್ಕೂಲ್, ಪ್ರೆಸಿಡೆನ್ಸಿ ಸ್ಕೂಲ್, ಸ್ಟೆಲ್ಲಾ ಮೇರಿಸ್ ಸ್ಕೂಲ್, ಬೆಥಾನಿ ಸ್ಕೂಲ್ ಮುಂತಾದ ಹೆಸರಾಂತ ಶಾಲೆಗಳು ಹಾಗೂ ನ್ಯಾಷನಲ್ ಕಾಲೇಜ್, ಮೌಂಟ್ ಕಾರ್ಮೆಲ್ ಕಾಲೇಜ್, ವಿಜಯ ಕಾಲೇಜ್, ಜ್ಯೋತಿ ನಿವಾಸ್ ಕಾಲೇಜ್, ಎನ್‌ಐಎಫ್‌ಟಿ, ಐಎಸ್‌ಎಸ್ ಶಿಕ್ಷಣ ಸಂಸ್ಥೆಗಳು, ರಮಣ ಮಹರ್ಷಿ ಅಕಾಡೆಮಿ ಫಾರ್ ಬ್ಲೈಂಡ್, ಎಸ್‌ಎಂಕೆಆರ್‌ವಿ ಮುಂತಾದ ಪ್ರತಿಷ್ಠಿತ ಕಾಲೇಜುಗಳಿಗೆ ನಿವೇಶನಗಳನ್ನು ಒದಗಿಸಿದೆ.
- ನಾಗರಿಕರ ಮನರಂಜನೆ, ಸೌಕರ್ಯ, ಆರೋಗ್ಯ, ಕಲೆ, ಸಾಹಿತ್ಯ, ಸಂಸ್ಕೃತಿಯ ಪ್ರವರ್ಧನೆಗೂ ಬಿಡಿಎ ಆದ್ಯತೆ ನೀಡಿದೆ. ಕ್ಲಬ್‌ಗಳು, ಅಂಚೆ ಕಚೇರಿಗಳು, ಕ್ರೀಡಾಂಗಣ, ರಂಗಮಂದಿರ ಆಸ್ಪತ್ರೆಗಳಿಗೆ ಸೂಕ್ತ ನಿವೇಶನ ನೀಡಿದೆ. ಮೋದಿ ಆಸ್ಪತ್ರೆ, ಬೆಂಗಳೂರು ಕಿಡ್ನಿ ಫೌಂಡೇಶನ್, ಬೆಂಗಳೂರು ವೈದ್ಯಕೀಯ ಮತ್ತು ಕ್ಯಾನ್ಸರ್ ಸಂಶೋಧನಾ ಕೇಂದ್ರ ಮುಂತಾದ ಆಸ್ಪತ್ರೆಗಳು, ಚೌಡಯ್ಯ ಸ್ಮಾರಕ ಭವನ, ರಂಗ ಶಂಕರ, ಲಲಿತಕಲಾ ಮಂದಿರದಂತಹ ಸಾಂಸ್ಕೃತಿಕ ಕೇಂದ್ರಗಳು ಮುಂತಾದವುಗಳು ಬಿಡಿಎ ರೂಪಿಸಿರುವ ಸಿಎ ನಿವೇಶನಗಳಲ್ಲಿ ತಲೆಯುತ್ತಿವೆ.

## ಪರಿಸರ ಕಾಳಜಿ

- ಎಲ್ಲಾ ವಸತಿ ಪ್ರದೇಶಗಳಲ್ಲಿ ಉದ್ಯಾನಗಳ ನಿರ್ಮಾಣ ಮತ್ತು ಬಯಲು ಸ್ಥಳಗಳ ಅನುಕೂಲಕ್ಕೆ ವ್ಯವಸ್ಥೆ.
- ಕೆರೆಗಳ ಸಂರಕ್ಷಣೆ - ನಗರದ ಸೌಂದರ್ಯ ಮತ್ತು ವಾತಾವರಣ ಕಾಪಾಡಲು ಪ್ರಯತ್ನ, ಲಾಲ್‌ಬಾಗ್, ಬೆನ್ನಿಗಾನಹಳ್ಳಿ ಮತ್ತು ಅಗರ ಕೆರೆಗಳ ನವೀಕರಣ ಮತ್ತು ನಿರ್ವಹಣೆ.

## ಮೂಲಸೌಕರ್ಯ ಅಭಿವೃದ್ಧಿಗೆ ಆದ್ಯಗಮನ

- ಇಂದಿರಾನಗರ, ಬನಶಂಕರಿ, ಎಚ್‌ಎಸ್‌ಆರ್ ಬಡಾವಣೆ, ಎಚ್‌ಬಿಆರ್ ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 15 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.
- ನಗರದ ವಾಹನ ಸಂಚಾರ ದಟ್ಟಣೆಯನ್ನು ತಪ್ಪಿಸಲು ಮತ್ತು ವಾಹನಗಳ ಸುಲಲಿತ ಸಂಚಾರಕ್ಕಾಗಿ ಹೊರ ವರ್ತುಲ ರಸ್ತೆ ನಿರ್ಮಾಣದ ಜೊತೆಗೆ ಹಲವಾರು ಸಂಚಾರ ವ್ಯವಸ್ಥೆ. ಡೈರಿ ವೃತ್ತ, ವೈಟ್‌ಫೀಲ್ಡ್ ರಸ್ತೆ, ಕೇಂದ್ರ ರೇಷ್ಮೆ ಮಂಡಳಿ, ಹೆಬ್ಬಾಳ, ಆನಂದರಾವ್ ವೃತ್ತ, ವಿಮಾನ ನಿಲ್ದಾಣ ರಸ್ತೆ ಮತ್ತು ಜಯದೇವ ಆಸ್ಪತ್ರೆ ಜಂಕ್ಷನ್‌ನಲ್ಲಿ ಏಳು ಹೊಸ ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.

## ವಿಶೇಷ ಚಟುವಟಿಕೆಗಳು

- ಬಿಡಿಎ ಆಧುನಿಕತೆಯ ವಾತಾವರಣಕ್ಕೆ ಸರಿಸಾಟಿಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಣೆ ಮಾಡುತ್ತಾ ಸಾಗಿದೆ. ಆರೋಗ್ಯ ಕ್ಷೇತ್ರಕ್ಕೂ ಅಡಿ ಇಟ್ಟಿದೆ. ಬೌರಿಂಗ್ ಆಸ್ಪತ್ರೆಯಲ್ಲಿ ಅಪಘಾತ ತುರ್ತು ಚಿಕಿತ್ಸಾ ವಿಭಾಗ ನಿರ್ಮಿಸಿದೆ.
- ಆಧುನಿಕ ಸ್ವರೂಪದ ತ್ಯಾಜ್ಯ ನೀರಿನ ಸಂಸ್ಕರಣಾ ಸ್ಥಾವರದ ಸ್ಥಾಪನೆ ಮೂಲಕ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ನಲ್ಲಿ ಮಾಲಿನ್ಯ ನೀರು ಶುದ್ಧೀಕರಣದಲ್ಲಿ ಹೊಸ ಅಧ್ಯಾಯ ಆರಂಭಿಸಿದೆ.
- ಲಾಲ್‌ಬಾಗ್ ಗಾಜಿನ ಮನೆ ಮತ್ತು ಗಾಂಧಿ ಭವನವನ್ನು ನವೀಕರಿಸಿ ಐತಿಹಾಸಿಕ ಸ್ಮಾರಕಗಳ ಸಂರಕ್ಷಣಾ ಕಾರ್ಯಕ್ಕೂ ತನ್ನನ್ನು ತೊಡಗಿಸಿಕೊಂಡಿದೆ.

## ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ ಕಾರ್ಯೋನ್ಮುಖವಾಗಿದೆ.

## ನಗರದ ಸುತ್ತ ಹೊಸ ಬಡಾವಣೆಗಳು

- ನಗರದ ಹೊರವಲಯದಲ್ಲಿ ಸುಮಾರು 56 ಗ್ರಾಮಗಳನ್ನು ಒಳಗೊಂಡಂತೆ ಐದು ಪರಿಸರ ಸ್ನೇಹಿ ಬಡಾವಣೆ ನಿರ್ಮಿಸಲು ನಿರ್ಧರಿಸಿದೆ. ಭೂ ಮಾಲೀಕರ ಸಕ್ರಿಯ ಪಾಲ್ಗೊಳ್ಳುವಿಕೆ ಮತ್ತು ಸಹಕಾರದೊಡನೆ ಈ ಕಾರ್ಯ ಸಾಧನೆ.
- ಸಾರ್ವಜನಿಕರಿಗೆ ವಿವಿಧ ಅಳತೆಗಳ 90,000 ನಿವೇಶನಗಳ ಹಂಚಿಕೆಗೆ ಯೋಜನೆ.
- ಈಗಾಗಲೇ ಕೆಂಪೇಗೌಡ ಬಡಾವಣೆ ನಿರ್ಮಾಣದ ಪ್ರಕ್ರಿಯೆ ಆರಂಭವಾಗಿದೆ.

## ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 12 ಕೆರೆಗಳನ್ನು ಬಿಡಿಎಗೆ ವಹಿಸಿದೆ. ಅಭಿವೃದ್ಧಿಪಡಿಸಲಾಗುವ ಕೆರೆಗಳು - ಉಲ್ಲಾಳ, ಮಲ್ಲತ್ತಹಳ್ಳಿ, ಕೊಮ್ಮಘಟ್ಟ, ರಾಮಸಂದ್ರ, ಜಕ್ಕೂರು, ಪಟೇನಹಳ್ಳಿ, ಸಂಪಿಗೆಹಳ್ಳಿ, ವೆಂಕಟೇಶ್‌ಪುರ, ಸೋಮಾಪುರ, ಕೋಣಸಂದ್ರ, ತಲಗಟ್ಟಪುರ ಮತ್ತು ಕೊತ್ತನೂರು ಕೆರೆಗಳು.

## ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ. 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**

ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-20
www.bdabangalore.org

ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ

# ದಾರ್ಶನಿಕರು

– ಗೊ.ರು. ಚನ್ನಬಸಪ್ಪ

'ದರ್ಶನ' ಎಂಬ ಶಬ್ದದಿಂದ 'ದಾರ್ಶನಿಕ' ಪದ ಬಂದಿದೆ. ದರ್ಶನ ಎಂದರೆ ತತ್ತ್ವ ಜಿಜ್ಞಾಸೆಯ ಒಂದು ಶಿಸ್ತು ಅಥವಾ ಪದ್ಧತಿ. ಅದೊಂದು ತತ್ತ್ವಶಾಸ್ತ್ರವೂ ಹೌದು, ಪ್ರಾಚೀನ ಪಂಡಿತರು ಹೇಳುವ ಪ್ರಕಾರ ಆರು ದರ್ಶನಗಳು ಹೆಸರಾಗಿವೆ: ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ ಮತ್ತು ಮೀಮಾಂಸೆ. ಈ ದರ್ಶನಗಳನ್ನು ಬಲ್ಲವರು ದಾರ್ಶನಿಕರು.

'ದರ್ಶನ' ದಿಂದ ಹುಟ್ಟಿದ ಇನ್ನೊಂದು ಶಬ್ದವಿದೆ. ಅದು 'ಪ್ರದರ್ಶನ'. ಈ ಪ್ರದರ್ಶನ ಬಹಿರಂಗದ ಅವಲೋಕನ; ದರ್ಶನ ಅಂತರಂಗದ ಜ್ಞಾನ. ಒಂದು ಹೊರ ನೋಟ, ಬಾಹ್ಯ ದೃಶ್ಯ. ಮತ್ತೊಂದು ಒಳನೋಟ, ಅಂತರಂಗ ಚಿಂತನ, ಪ್ರದರ್ಶನಕ್ಕೆ ಪ್ರೇಕ್ಷಕರು ಬೇಕು; ದರ್ಶನಕ್ಕೆ ದಾರ್ಶನಿಕರು ಬೇಕು.

ಇಲ್ಲಿನ ಚಿಂತನಕ್ಕಾಗಿ ದಕ್ಷಿಣದ ನಾಲ್ವರು ದಾರ್ಶನಿಕರನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಆಯ್ಕೆಯಲ್ಲಿ ದಕ್ಷಿಣ ಭಾರತದ ಪ್ರದೇಶ ಮತ್ತು ಭಾಷೆ ಎರಡಕ್ಕೂ ಪ್ರಾತಿನಿಧ್ಯವಿದೆ. ಆ ದಾರ್ಶನಿಕರೆಂದರೆ ಸರ್ವಜ್ಞ, ವೇಮನ, ತಿರುವಳ್ಳುವರ್ ಮತ್ತು ನಾರಾಯಣ ಗುರು. ಸರ್ವಜ್ಞ ಕರ್ನಾಟಕದವನು, ಭಾಷೆ ಕನ್ನಡ. ವೇಮನ ಆಂಧ್ರದವನು, ಭಾಷೆ ತೆಲುಗು. ತಿರುವಳ್ಳುವರ್ ತಮಿಳುನಾಡಿನ ಬೆಳಕು, ಭಾಷೆ ತಮಿಳು. ನಾರಾಯಣಗುರು ಕೇರಳದವನು, ಭಾಷೆ ಮಲೆಯಾಳಂ. ಈ ನಾಲ್ವರ ದೇಶ–ಭಾಷೆಗಳು ಭಿನ್ನವಿದ್ದರೂ ಸಂವೇದನೆ ಮಾತ್ರ ಒಂದೇ; ಸಂದೇಶ ಮಾತ್ರ ಒಂದೇ. ಅದು ಸಾತ್ವಿಕ ಸಂವೇದನೆ; ಜೀವನ ಸಂದೇಶ!

ಇವರು ಲೋಕದಾರ್ಶನಿಕರು; ಅಷ್ಟೇ ಸ್ವತಂತ್ರ ವಿಚಾರವಾದಿಗಳು. ತಾವು ಕಂಡ ಸತ್ಯದ ಬೆಳಕನ್ನು ಜನರ ಬಳಿಗೇ ಕೊಂಡೊಯ್ದು, ಜನರ ಭಾಷೆಯಲ್ಲೇ ಚಿತ್ತರಿಸಿದವರು. ಇವರದು ಶಾಸ್ತ್ರ ಧರ್ಮವಲ್ಲ; ಶಾಶ್ವತ ಧರ್ಮ. ಶಕುನ ಸಿದ್ಧಾಂತವಲ್ಲ; ಶರಣ ಸಿದ್ಧಾಂತ. ಇವರದು ಗ್ರಂಥಸ್ಥ ಧರ್ಮವಲ್ಲ; ಅಂತರಂಗದ ಅನುಭಾವ ಧರ್ಮ. ಪ್ರವಚನ ಧರ್ಮವಲ್ಲ; ಪ್ರಾಯೋಗಿಕ ಧರ್ಮ!

ಈ ನಾಲ್ವರು ಒಂದೊಂದು ಗುಣ ವಿಶೇಷದಿಂದ ಪ್ರಸಿದ್ಧರಾಗಿದ್ದಾರೆ. ಕನ್ನಡದ ಸರ್ವಜ್ಞ 'ಕ್ರಾಂತಿ ಕವಿ' ಎನಿಸಿದ್ದರೆ ತೆಲುಗಿನ ವೇಮನ 'ಜೀವನ ಯೋಗಿ' ಎನಿಸಿದ್ದಾನೆ. ಹಾಗೆಯೇ ತಮಿಳಿನ ತಿರುವಳ್ಳುವರ್ 'ತತ್ತ್ವಜ್ಞಾನಿ' ಎನಿಸಿದ್ದರೆ, ಮಲೆಯಾಳಂನ ನಾರಾಯಣಗುರು 'ಸಮಾಜ ವಿಜ್ಞಾನಿ' ಎನಿಸಿದ್ದಾನೆ. ಇವರೆಲ್ಲ ಲೋಕ ದಾರ್ಶನಿಕರಾಗಿದ್ದಂತೆ ಲೋಕ ವಿಮರ್ಶಕರೂ ಆಗಿದ್ದವರು. ಇವರೆಲ್ಲ ಸತ್ಯಶೋಧಕರು, ಆಧ್ಯಾತ್ಮಿಕ ಅನುಭಾವಿಗಳು. ಅದಕ್ಕಿಂತ ಮಿಗಿಲಾಗಿ ಸಮಾಜ ಚಿಂತಕರು. ಜನ ಬದುಕಬೇಕೆಂಬುದು ಅವರ ಉತ್ಕಟ ಹಂಬಲವಾಗಿತ್ತು. ಅಂತೇ ಅವರು ತಮ್ಮ ಅನುಭಾವಿಕ ವಾಣಿಗಳಿಂದ ಜನಮನದ ಮೇಲೆ ಪ್ರಭಾವ ಬೀರಿದರು; ಪರಿವರ್ತನೆ ಮಾಡಿದರು.

ದಕ್ಷಿಣದ ಈ ನಾಲ್ವರು ದಾರ್ಶನಿಕರೂ ಭಕ್ತಿ ಪಂಥದವರೇ, ಆದರೂ ಸಾಮಾಜಿಕ ದೃಷ್ಟಿಯಿಂದ ಇವರೆಲ್ಲ ಉಜ್ವಲ ಕ್ರಾಂತಿಕಾರರೇ ಆಗಿದ್ದಾರೆ. ಧರ್ಮದ ಅಪವ್ಯಾಖ್ಯೆಗಳು, ಪುರೋಹಿತಶಾಹಿ ಶೋಷಣೆಗಳು, ಅಂಧಶ್ರದ್ಧೆಯ ಅರ್ಥಹೀನ ಆಚರಣೆಗಳು, ಸಾಮಾಜಿಕ ಅಸಮಾನತೆಗಳು ಮೊದಲಾದ ಪಿಡುಗುಗಳಿಂದ ಸಮಾಜವನ್ನು ಬಿಡುಗಡೆ ಮಾಡುವುದೇ ಅವರ ಮುಖ್ಯ ಆಶಯವಾಗಿತ್ತು.

ಸರ್ವಜ್ಞ ನುಡಿಗಳು ನಿಷ್ಠುರದ ಕಿಡಿಗಳಾಗಿದ್ದರೆ, ವೇಮನ ವಾಣಿಗಳು ಸಾಮಯಿಕ ಸಿದ್ಧಾಂತಗಳಾಗಿವೆ. ತಿರುವಳ್ಳುವರ್ ಸೂಕ್ತಿಗಳು ಅರಿವಿನ ಭಂಡಾರವಾಗಿದ್ದರೆ, ನಾರಾಯಣ ಗುರುವಿನ ಮಾತುಗಳು ನೀತಿ ಸೂತ್ರಗಳಾಗಿವೆ. ಈ ಎಲ್ಲಾ ದಾರ್ಶನಿಕರ ಚಿಂತನೆಯ ಫಲವಾಗಿ ಆಯಾ ಭಾಷೆಗಳ ಸಾಹಿತ್ಯ ಶ್ರೀಮಂತಗೊಂಡಿದೆ. ಸಂಸ್ಕೃತಿ ಸಂವರ್ಧನೆಯಾಗಿದೆ; ನಿಜ ಧರ್ಮದ ಸಂರಕ್ಷಣೆಯಾಗಿದೆ. ಒಟ್ಟಾರೆ ಇವರೆಲ್ಲರೂ ನೀಡಿರುವ ಜೀವನ ಸಂದೇಶ ಮಾನವನ ಬದುಕಿನ ಹಾದಿಗೆ ಕಟ್ಟಿಕೊಟ್ಟ ಬುತ್ತಿಯಾಗಿದೆ.

# ಸ್ಕೌಟ್ ಕೌಶಲ್ಯ

**ಶಿಬಿರಾಗ್ನಿ ಉದಂತ ಸಂ – 4**

## ಸ್ಕೌಟ್ ಪೆಟ್ರೋಲು

...............ಜನವರಿ ಸಂಚಿಕೆಯಿಂದ ಮುಂದುವರೆದಿದೆ.

### ಪೆಟ್ರೋಲ್ ಪ್ರಾಣಿಗಳು

ಕರ್ನಾಟಕದಲ್ಲಿ ಸಾಮಾನ್ಯವಾಗಿ ಕಾಣಬರುವ 34 ಪ್ರಾಣಿಗಳು ಮತ್ತು ಪಕ್ಷಿಗಳನ್ನು ಮಾತ್ರ, ಮೂಲಗ್ರಂಥದಲ್ಲಿರುವ 62 ಪ್ರಾಣಿಗಳು, ಪಕ್ಷಿಗಳ ಚಿತ್ರಗಳಿಂದ ಆಯ್ದುಕೊಂಡು, ಅವುಗಳ ಕರೆಗಳು ಮತ್ತು ಸ್ಕೌಟುಗಳು ತಮ್ಮ ಸಮವಸ್ತ್ರದ ಮೇಲೆ ಧರಿಸುವ ಪೆಟ್ರೋಲ್ ಬಣ್ಣಗಳನ್ನು ಈ ಕೆಳಗೆ ಕೊಡಲಾಗಿದೆ.



ಮೊಸಳೆ
(Allegator)
ಒರಟಾಗಿ ಗುಟುರು
'ಹೂ-ಅಹ್-ಅರ್'
ಹಸುರು ಮತ್ತು ಖಾಕಿ



ಚಿಗರೆ
(Antelope)
ಎತ್ತರದ ಸ್ಥಾಯಿಯ ಅಬ್ಬರ
'ಮಿಯಾವ್ವೋಕ್'
ಕಡು ನೀಲಿ ಮತ್ತು ಬಿಳುಪು



ಕರಡಿ
(Bear)
ಗುರುಗುಟ್ಟುವುದು
'ಭೂರ್‌ರ್‌ರ್'
ಕಂದು ಮತ್ತು ಕಪ್ಪು



ಮಹಿಷ
(Buffalo)
ಗೂಳಿಯಂತೆ ಗುಟುರು
'ಉಮ್ಮ್-ಮ್ಮಾವ್'
ಕಡುಬೂದು



ವೃಷಭ
(Bull)
ಗುಟುರು ಹಾಕುವುದು
'ಉಮ್ಮ್-ಮ್ಮಾವ್'
ಕೆಂಪು



ಗೂಳಿನಾಯಿ
(Bull dog)
ಗುರುಗುಟ್ಟುವುದು
'ಗ್ರ್ರರ್-ಆಅ-ವ್'
ತೆಳುನೀಲಿ-ಕಂದು



ಬೆಕ್ಕು
(Cat)
'ಮ್ಯಾವ್'
ಬೂದು-ಕಂದು



ನಾಗ
(Cobra)
'ಸ್ ಸ್ ಸ್....'
ಕೇಸರಿ-ಕಪ್ಪು



ಹುಂಜ
(Cockrel)
'ಕಾಕ್-ಆ-ದೂಬಲ್-ಡೂ'
ಕೆಂಪು-ಕಂದು



ಕೋಗಿಲೆ
(Cuckoo)
'ಕೂ-ಊ'
ಬೂದು



ಪಾರಿವಾಳ
(Dove)
'ಕು-ಉ-ಉ'
ಬೂದು-ಬಿಳುಪು



ಹದ್ದು
(Eagle)
ಕಿವಿ ಕೊರೆಯುವಂತೆ
ಕೀರಲು ಧ್ವನಿ 'ಕ್ರೀೀ'
ಹಸುರು-ಕಪ್ಪು



ಆನೆ
(Elephant)
ಘೀಳಿಡುವುದು
ಟ್ರೀರ್-ಆಂಘ್-ಆಂಪ್-ಆರ್'
ನೇರಳೆ-ಬಿಳುಪು



ನರಿ
(Fox)
ಬೊಗಳುವುದು
'ಹ್ವಾ-ಹ್ವಾ'
ಹಳದಿ-ಬೂದು



ಡೇಗೆ
(Hawk)
(ಹದ್ದಿನಂತೆಯೇ)
ನಸುಗೆಂಪು



ಕೊಕ್ಕರೆ (ನೀರು ಹಕ್ಕಿ)
(Heron)
'ಕ್ವಾಪ್ಕ್'
ಹಸುರು-ಬೂದು



ನೀರಾನೆ
(Hippo)
'ಬ್ ರ್ ಷ್ ಷ್ ಷ್'
ನಸುಗೆಂಪು-ಕಪ್ಪು



ಕುದುರೆ
(Horse)
ಕೆನೆಯುತ್ತದೆ 'ಹ್ವೀ-ಹ್ವೀ'
ಕಪ್ಪು-ಬಿಳುಪು



ಬೇಟೆನಾಯಿ
(Hound)
ಬೊಗಳುತ್ತದೆ 'ಬೌ-ಬೌ'
ಕೇಸರಿ



ಮಿಂಚುಳ್ಳಿ (ಜಾಲಗಾರ ಹಕ್ಕಿ)
(King fisher)
'ಚಿಪ್-ಚಿಪ್-ಚಿ ಪ್'
ಕಿಂಗ್ ಫಿಷರ್ ನೀಲಿ



ಸಿಂಹ (Lion)
(ಘರ್ಜನೆ)
'ಊ-ಹಗ್'
ಹಳದಿ-ಕೆಂಪು



ಮುಂಗುಸಿ
(Mongoose)
ಕೀರಲು ಧ್ವನಿ
'ಚೇ-ಪ್'
ಕಂದು ಕೇಸರಿ



ಚಿರತೆ
(Panther)
ನಾಲಿಗೆ ಬಾಯೊಳಗೆ
'ಕೀ ಊಕ್'
ಹಳದಿ



ನವಿಲು
(Peacock)
'ಬೀ ಓಕ್'
ಹಸಿರು-ನೀಲಿ



ಟಗರು
(Ram)
ಅರಚುವುದು
'ಬ್ಯಾ-ಆಆ'
ಕಂದು



ಕಾಗೆ (ಡೊಂಬ ಕಾಗೆ)
(Raven)
''ಕಾಕ್-ಕಾ''
ಕಪ್ಪು



ಖಡ್ಗಮೃಗ
(Rhino)
ಘರ್ಜನೆ
'ವರ್ ರ್-ವರ್ ರ್'
ಕಡುನೀಲಿ-ಕೇಸರಿ



ಅಳಿಲು
(Squirre)
'ನಟ್ ನಟ್ ನಟ್'
ಬೂದು ಮತ್ತು
ಕಡು ಕೆಂಪು



ಹಂಸ
(Swan)
'ಸ್ -ಸ್ -ಸ್ -ಸ್'
ಬೂದು-ಆರುಣವರ್ಣ



ಹುಲಿ
(Tiger)
ವರಗುಟ್ಟುವುದು
'ಗ್ರಾವ್'
ನೇರಳೆ ಬಣ್ಣ



ಕಾಡುಹಂದಿ
(Wild Boar)
ಗುರುಗುಟ್ಟುವಿಕೆ
'ಬ್ರೂಫ್-ಬ್ರೂಫ್'
ಬೂದು-ನಸುಗೆಂಪು



ತೋಳ
(Wolf)
ಹೂಳುವುದು
'ಹೋ-ವ್ಹೂ ಊ ಊ'
ಹಳದಿ-ಕಪ್ಪು



ಮರಕುಟುಕ
(Woodpecker)
ನಗುವಿನಂತೆ ಕೂಗು
'ಹಾಫ್ಲ್-ಆಫ್ಲ್-ಆಫ್ಲ್'
ಹಸಿರು-ನೇರಳೆ



ಕಾಡುಪಾರಿವಾಳ
(Wood Pigeon)
'ಬುಕ್-ಹೂರೂ'
ನೀಲಿ-ಬೂದು

(ಮುಂದುವರೆಯುತ್ತದೆ)



## ಧಾರವಾಡ ಜಿಲ್ಲೆ

13-02-2009 ರಂದು ನವಲಗುಂದಾ ಸ್ಥಳೀಯ ಸಂಸ್ಥೆಯ ತಾಲ್ಲೂಕು ಮೇಳದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಜ್ಯೋತಿ ಬೆಳಗಿಸುವ ಮುಖಾಂತರ ಮೇಳವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಗ್ರಾಮ ಪಂಚಾಯತ್ ತಾಲ್ಲೂಕು ಪಂಚಾಯತ್ ಹಾಗೂ ಎಸ್.ಡಿ.ಎಂ.ಸಿ. ಸದಸ್ಯರು ಭಾಗವಹಿಸಿದ್ದರು.



### ರಾಯಚೂರು ಜಿಲ್ಲೆ

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಧಡೆಸುಗೂರು ಸರಕಾರಿ ಸಂಯುಕ್ತ ಪ್ರೌಢಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಉಪ್ಪಳ ಗ್ರಾಮಕ್ಕೆ ಸಮಾಜಸೇವೆಗಾಗಿ ತೆರಳುತ್ತಿರುವುದು

### ನರಗುಂದ

ನರಗುಂದ ಪುರಸಭೆಯ ಮುಂದೆ ಸೇರಿದ ಸ್ಕೌಟ್ಸ್-ಗೈಡ್ಸ್ ಮಕ್ಕಳನ್ನು ಸ್ವಾಗತಿಸಿ, 'ಸ್ವಚ್ಛತಾ ಕಾರ್ಯಕ್ರಮದ ಉದ್ಘಾಟನೆ'ಯನ್ನು ಪುರಸಭೆಯ ಉಪಾಧ್ಯಕ್ಷರಾದ, ಶ್ರೀ ವಾಸುಜೋಗಣ್ಣನವರು ಸ್ಕೌಟ್ ಧ್ವಜವನ್ನು ಹಿಡಿಯುವ ಮೂಲಕ ಚಾಲನೆ ನೀಡಿದರು.





### ಬೆಳಗಾಂ ಜಿಲ್ಲೆ

ಬೆಳಗಾವಿಯ ನೆಹರು ಕ್ರಿಡಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ರಾಷ್ಟ್ರಪ್ರಶಸ್ತಿ ಪುರಸ್ಕೃತ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ಬೆಳಗಾವಿಯ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಸ್ಥಾನಿಕ ಸಹಾಯಕರಾದ ಡಾ. ವಿಜಯಕುಮಾರ್ ತೋರಗಲ್ ರವರು ಶಾಲುಹೊದಿಸಿ ಹಾರ ಹಾಕಿ ಸನ್ಮಾನಿಸುತ್ತಿರುವುದು

Cont'd from Page No. 6

## Coastal Trekking Camp held at Mangalore

National level Coastal Trekking Camp was held from 2nd to 6th March 2009 at Mangalore. Dakshina Kannada District Association hosted the Event . 205 Rovers, 16 Rangers and 14 Staff Members from 10 States attended the event. 125 Rovers & Rangers from Karnataka participated in the event.

***Rovers & Rangers from Uttrakhand, Uttar Pradesh, Hariyana, West Bengal, Mizoram, Western Railway (Bombay), Rajasthan, Punjab, Kerala and Karnataka attended the event.***

Sri Mahendra Sharama, Regional Organising Commissioner (S), Southern Region was the Leader of the event. Sri I.A. Kairanna Dist. Chief Commissioner and his team organised the camp with the support and co-operation from the National Headquarters, New Delhi, District Administration, Department of Fishries, Local Authorities, Donors and the Public.

Sri U.T. Khadar, MLA., Mangalore inaugurated the event. Sri K.M. Gadka, Joint Commissioner, Mangalore City Corporation, Sri Moses Jayayprakash Block Educational Officer were the Guests.

Dr. Nidarshan Hegade, Dist.Commandant, Homeguards flagged off the Trekking. Sri U.G.K. Bhat, Dist. Headquarters Commissioners (S.) and Sri Praveen Kumar, Asst. Secretary and other officials were present.

The Valedictory function was held on 5th March 2009. Sri K.N. Alva was the Chief Guest. Sri I.A. Kairanna, District Chief Commissioner presided over the function.

## National Level Water Regatta Camp held at Kondajji

National Level Water Regatta Camp was held at Kondajji Basappa Scout and Guide Training Centre, Kondajji from 13th to 17the March 2009.

Sri Mahendra Sharama, Regional Organising Commissioner (S), Southern Region was the Leader of the event.

48 Scouts, Rovers and Rangers from five states participated in the event. 22 Scouts and 3 Rangers from Karnataka attended the event.

***Participants from Jammu & Kashmir, Haryana, Madhya Predesh S.E. Railway, (Ranchi- Jharkhand and Karnataka attended the event.***

Sri T.S. Lucas, State Commissioner (S) The Bharat Scouts & Guides, Karnataka inaugurated the event and camped for two days and guided to organise the event sucessfully. During the event, activities like Rafft Making, Sail Making, Kayaking, Throwing life line, Life saving Swimming & Group discussion were held.

Sri Udayakumar, expert in Model making from Bengaluru, Sri Madhusudhan, Asst. Secretary Bangalore

South assisted the event. Capt. Mahendra Miji, Merchant Navy from Bombay addressed the participants on Merchant Navy & Water activities. Sri Muruga Rajendra Chigateri, Dist. Chief Commissioner, Bharat Scouts & Guides, Davanagere visited the camp.

Sri M.A. Chellaiah, Headquarters Commissioner, (Publication) moderated a Group discussion on Water activities Rover, Ranger & Community. Sri T.Manjunathachar, Asst. State Organising Commissioner (S) assisted the event in life saving Rafft making etc., Sri O. Manjappa, Warden helped to organise the event.

The Valedictory function was held on 16-3-2009. Sri P. Nagaraj, Executive Officer Taluk Panchayat, Harihara was the Chief Guest.

## National Level Rovers & Rangers Meet Held at Dr. Annie Besant Park

National Level Rovers & Rangers meet was held from 22nd to 26th March 2009 at Dr. Annie Besant Park, Bangalore Rural Dist. 120 Rovers & Rangers from 5 States attended the event. 20 Rovers & Rangers from Karnataka participated in the event.

***Rovers Rangers from Tamil Nadu, Kerala, Southern Railway, South Central Railway (Secundarabad & Vijayawada) attended the event.***

Miss Suman Latha, Asst. Director, Southern Region Bangalore was the Leader of the event.

---

**Sri Chinna Swamy Reddy, L.T. (s) and Scribe,**
**Co-ordinated the 61st Himalaya Wood Badge Holders meet**
**held from 19th to 23rd January 2009 at Bhubaneshwar, Orissa State.**

---

Scouting & Guiding

Is a Character Building

Educational Movement

**National Level Training Programme for Pre-ALT (Scout & Guide Wing) : Corrigendum in eligibility new conditions. Wide NTC Circular No. 49/2247/2009 Dated 12-03-2009**

**Scout Wing :** 1. After issuing the HWB Parchment, a Unit Leader should work for at least 2 years and run the unit effectively and submit the progress report as per proforma duly verified by DOC(S) and DTC(S)

2. Should produce at least 2 golden Arrow Cubs or 2 Rashtrapati Scouts or 2 Rashtrapati Rovers as the came may be. In case of Upper Primary / Middle School, Unit Leader has to produce 8 Tritiya Sopan Scouts or 6 Rajya Puruskar.

**Guide Wing :** 1. Participants should be running unit effectively with valid warrant. produce certificate issued by Dist. Commissioner (G)

2. Certificate issued by DOC/DC of producing 2 Swarn Pankh / 8 Tritiya Sopan / 2 Nipun in the Unit after receiving Parchment.

3. Certificate issued by DTC/STC(G) of assisting 1 Basic / Advance as a full time staff member after receiving HWB Parchment.

### HWB Training Course for Cub / Scout / Rover sections

| | | |
|---|---|---|
| 1) | Nature of the Course | : Himalaya Wood Badge Course for Cub/Scout/Rover Section. |
| 2) | Dates | : 18.05. 2009 to 25.05.2009 (08 Days) |
| 3) | Venue | : Bharat Scouts & Guides, National Training Centre, Pachmarhi (M.P.) 461881 |

### HWB Training Course for Flock / Guide / Ranger sections

| | | |
|---|---|---|
| 1) | Nature of the Course | : Himalaya Wood Badge Course for Flock/Guide/Ranger Section. |
| 2) | Date of Course | : 18.05. 2009 to 24.05.2009 (07 Days) |
| 3) | Venue | : Bharat Scouts & Guides, National Training Centre, Pachmarhi (M.P.) 461881 |

### ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಸಿದ್ಧತಾ ಶಿಬಿರ ಹಾಗೂ ಪೂರ್ವಬಾವಿ ಪರೀಕ್ಷಾ ಶಿಬಿರ

ದಿನಾಂಕ: 04-05-2009 ರಿಂದ 08-05-2009 ರ ವರೆಗೆ ಡಾ|| ಅನಿಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರ, (ಬೆಂಗಳೂರು ಗ್ರಾಮಾಂತರ ಜಿಲ್ಲೆ) ಹಾಗೂ ದಿನಾಂಕ 12-05-2009 ರಿಂದ 16-05-2009 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ ಕೊಂಡಜ್ಜಿ, ದಾವಣಗೆರೆ ಜಿಲ್ಲೆಯಲ್ಲಿ ಮೇಲ್ಕಂಡ ಶಿಬಿರಗಳನ್ನು ಏರ್ಪಡಿಸಲಾಗಿದೆ. ಸಂಭಂದ ಪಟ್ಟ ಎಲ್ಲಾ ಜಿಲ್ಲಾ ಸಂಸ್ಥೆಗಳಿಗೂ ಸುತ್ತೋಲೆಯನ್ನು ರವಾನಿಸಲಾಗಿದೆ.

# ತಾಯಿ ದೇವರು

ದೇವರು ಎಂದರೆ ಎಲ್ಲಿಹನಮ್ಮ
ಕಾಣನು ಕಣ್ಣಿಗೆ ಏಕಮ್ಮ?

ಪ್ರತಿದಿನ ನೀನೇ ಪೂಜಿಸಿ ನಮಿಸುವ
ಮೂರ್ತಿಯೆ ದೇವರು ಏನಮ್ಮ?

ದೇವರು ಇಲ್ಲದ ಜಾಗವೆ ಇಲ್ಲ
ಕೇಳೋ ಕಂದ ಜಗದಲ್ಲಿ
ಕಲ್ಲಲಿ, ಹೂವಲಿ, ನೆಲಜಲ ಮುಗಿಲಲಿ
ಇರುವನು ನಾನಾ ರೂಪದಲಿ

ಬೇಡಿದುದೆಲ್ಲವ ಕೊಡುವವ ಅವನೇ
ಕಷ್ಟವು ಬಂದರೆ ಕಾಯುವನು
ಅವನನು ನಂಬಲು ಕಷ್ಟವು ದೂರವು
ಅವನೇ ಎಲ್ಲಕು ಕಾರಣನು

ಆದರೆ ಅಮ್ಮ, ಹೊಟ್ಟೆಯು ಹಸಿದರೆ
ಅನ್ನವ ಕೊಡುವಳು ನೀನಮ್ಮ
ಕೆಳಗಡೆ ಬಿದ್ದು ಅಳುತಿರೆ ನನ್ನನು
ಎತ್ತಿ ಮುದ್ದಿಸುವೆ ನೀನಮ್ಮ

ಕಣ್ಣಿಗೆ ಕಾಣದ ದೇವರಿಗಿಂತಲು
ಕಾಣುವ ದೇವರೆ ನೀನಮ್ಮ!
ನನ್ನನು ಸಾಕಿ ಸಲಹುವ ನೀನೇ
ದೇವರಿಗಿಂತಲು ಹೆಚ್ಚಮ್ಮ!

– ಬೇಡರೆಡ್ಡಿಹಳ್ಳಿ ಪಂಪಣ್ಣ

ಮಾಜಿ ಗೌರವ ಕಾರ್ಯದರ್ಶಿ
ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

**ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ**
**Karnatak Scout & Guide News Magazine**

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227



**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West Posted at: Bangalore City H.P.O. on 30-03-2009

# THE BHARATH SCOUTS & GUIDES

## NATIONAL LEVEL ROVERS & RANGERS COASTAL TREKKING CAMP - 2009

HOSTED BY: DAKSHINA KANNADA DISTRICT ASSOCIATION MANGALORE
2 - 3 - 2009 to 6 - 3 - 2009





**If not delivered, please return to :**
**THE EDITOR**, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine